# ನುಗ್ಗೆಹಳ್ಳಿ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳು



**ಅವತಾರ ಕಾಲ: 18-10-1892 ಪರಮಪದವಿ: 23-7-1981**

ಆತ್ರೇಯಾದ್ರಾಮಮಿಶ್ರಾತ್ ನಯನಿಪುಣಮತೇಃ ಪ್ರಾಪ್ತಚಕ್ರಾಂಕಯೋಗಂ
ಶ್ರೀವಾಸಾದ್ರಾಘವಾರ್ಯಾತ್ ಅಧಿಗತನಿಗಮಾಂತದ್ವಯೀಸಾರ ತೃಪ್ತಂ ।
ತಸ್ಮಾದೇವಾಪ್ತನೈಜ ಪ್ರಪದನಸುಹಿತಂ ಶಬ್ದತಂತ್ರ ಪ್ರವೀಣಂ
ವಂದೇ ಜಾನಾರ್ದನಾರ್ಯಂ ಗುರುಗುಣಮಹಿತಂ ಶಾಸ್ತ್ರವಿದ್ವಾದಿಮೌಲಿಮ್ ॥

# ಶ್ರೀ ಉ॥ ವೇ॥ ನುಗ್ಗೆಹಳ್ಳಿ ವಿದ್ವಾನ್ ಸೋ. ಜನಾರ್ದನಾಚಾರ್ಯ ಸ್ವಾಮಿಗಳ ಚರಿತ್ರೆ

ಲೇಖಕರು :

**ಪಂಡಿತರತ್ನಂ ಪಂಡಿತಪ್ರವರ ರಾಜ್ಯಪ್ರಶಸ್ತಿವಿಜೇತಾ**

**ವಿದ್ವಾನ್ ಸೋ. ರಾಮಸ್ವಾಮಿ ಅಯ್ಯಂಗಾರ್ಯರು**

ನಿವೃತ್ತ, ಅಲಂಕಾರಶಾಸ್ತ್ರ ಪ್ರಾಧ್ಯಾಪಕರು

ಶ್ರೀಮನ್ ಮಹಾರಾಜ ಸಂಸ್ಕೃತ ಮಹಾ ಪಾಠಶಾಲಾ, ಮೈಸೂರು.

ಪ್ರಕಾಶಕರು :

**ಶ್ರೀ ಎನ್. ಆರ್. ಶ್ರೀನಿವಾಸರಾಘವನ್,**

ಎಂ.ಎ., ಸಿ.ಡಬ್ಲ್ಯು.ಎ., ಕಾಸ್ಟ್ ಅಕೌಂಟೆಂಟ್, ಮೈಸೂರು.

**ಶ್ರೀ ಎನ್.ಆರ್. ಮುರಳೀಧರ,** ಬಿ.ಕಾಂ, ಎಂ.ಎ., ಬಿ.ಎಡ್.

ವ್ಯಾಕರಣ, ಅಲಂಕಾರ ವಿದ್ವತ್,

ಸಹಾಯಕ ವಿದ್ವಾಂಸರು

ಶ್ರೀರಾಮಮಿಶ್ರ ಸಂಸ್ಕೃತ ವಿದ್ಯಾಪೀಠ

290, "ಸಂಸ್ಕೃತ ಸದನಂ"

**ಸೀತಾವಿಲಾಸ ಅಗ್ರಹಾರ, ಮೈಸೂರು-570 024**

॥ ಶ್ರೀಃ ॥

# ಪ್ರಕಾಶಕರ ನುಡಿ

ವಿಶಾಲ ವಸುಮತಿಯಲ್ಲಿ ಸುಮತಿಯಲ್ಲಿ ಸುವಿಖ್ಯಾತರಾದ ಸುಧೀಮಣಿಗಳು "ಸಹಸ್ರೇಷು ಚ ಪಂಡಿತಃ" ಎಂಬಂತೆ ವಿರಳ. ನಮ್ಮ ಭಾರತದ ಭವ್ಯ ದಿವ್ಯ ಸಂಸ್ಕೃತಿಯಲ್ಲಿ ಅನೇಕ ಮತಾಚಾರ್ಯರ ಸಿದ್ಧಾಂತಗಳು ಪ್ರಚಾರದಲ್ಲಿವೆ. ಅದರಲ್ಲಿ ಶ್ರೀಭಗವದ್ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತ ಪ್ರಚಾರದಲ್ಲಿ ಪಣತೊಟ್ಟ ಶ್ರೀರಾಮಮಿಶ್ರಾಚಾರ್ಯರ ವಂಶದಲ್ಲಿ ಅವತರಿಸಿ ಹಲವು ದಶಕಗಳ ಕಾಲ ಸಂಸ್ಕೃತ ಸಾರಸ್ವತ ಲೋಕಕ್ಕೆ ಗಣನೀಯ ಸೇವೆ ಸಲ್ಲಿಸಿದ ನಮ್ಮ ಪಿತಾಮಹರೂ ಪರಮಾಚಾರ್ಯರೂ ಆದ ಸಂಗ್ಗೇಹಳ್ಳಿಯ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳ ಶತಮಾನೋತ್ಸವ ಸಂದರ್ಭದಲ್ಲಿ ನಮ್ಮ ತೀರ್ಥರೂಪುಗಳಾದ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ರಾಮಸ್ವಾಮಿ ಐಯ್ಯಂಗಾರ್ಯರು ತಮ್ಮ ತೀರ್ಥರೂಪು ಹಾಗೂ ವಿದ್ಯಾಗುರುಗಳಾದ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳ ವಂಶದ ಹಿನ್ನೆಲೆ ಹಿರಿಮೆಗಳೊಂದಿಗೆ ಅವರ ಪಾಂಡಿತ್ಯ, ವಾಕ್ಪಟುತ್ವ, ವಾದಸಾಮರ್ಥ್ಯ ಮುಂತಾದ ಅನಂತ ಗುಣಗಳನ್ನು ಭಕ್ತ್ಯಾದರಗಳಿಂದ ಈ ಕಿರುಹೊತ್ತಿಗೆಯಲ್ಲಿ ತಿಳಿಯಾಗಿ ತಿಳಿಸಿದ್ದಾರೆ. ಇಂತಹ ಕಿರುಹೊತ್ತಿಗೆಯ ಪ್ರಕಾಶನದಲ್ಲಿ ಪೌತ್ರರಾದ ನಮ್ಮ ಭಾಗವಹಿಸುವಿಕೆಯು ನಮ್ಮ ಭಾಗ್ಯ ವಿಶೇಷವಲ್ಲದೇ ಮತ್ತೇನು ? ಇಂತಹ ಪವಿತ್ರಾತ್ಮರಾದ, ಪ್ರಾತಃಸ್ಮರಣೀಯರಾದ ಪರಮ ಪೂಜ್ಯ ಪಿತಾಮಹರಾದ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳ ನಡೆನುಡಿಗಳು ನಮ್ಮೆಲ್ಲರ ದಾರಿದೀಪವಾಗಿರಲೆಂಬುದೇ ನಮ್ಮ ಬಯಕೆ.

ಪ್ರಕಾಶಕರು

**ಶ್ರೀ ಎಸ್. ಆರ್. ಶ್ರೀನಿವಾಸರಾಘವನ್,**

ಬಿ.ಬಿ.ಎಂ , ಎಂ.ಎ., ಗ್ರಾಡ್ ಸಿ.ಡಬ್ಲ್ಯೂ.ಎ.

**ಶ್ರೀ ಎಸ್. ಆರ್. ಮುರಳೀಧರ,**

ವ್ಯಾಕರಣ, ಅಲಂಕಾರ ವಿದ್ವತ್

ಬಿ.ಕಾಂ., ಎಂ.ಎ., ಬಿ.ಇಡಿ.

ದಿನಾಂಕ : 9-1-1993

॥ ಶ್ರೀಃ ॥

# ಶ್ರೀ ಉ॥ ವೇ॥ ನುಗ್ಗೆಹಳ್ಳಿ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳ ಚರಿತ್ರೆ

ದಾಸನ ವಿಜ್ಞಾಪನೆಗಳು

ಶ್ರೀ ಉ॥ವೇ॥ ವಿದ್ವಾನ್ ಸೋ. ಜನಾರ್ದನಾಚಾರ್ಯ ಸ್ವಾಮಿಗಳ ಚರಿತ್ರೆಯನ್ನು ಬರೆಯಲು ಉಪಕ್ರಮಿಸಿದುದರ ಉದ್ದೇಶವೇನೆಂದರೆ ಆಚಾರ್ಯರನ್ನು ಪ್ರಕಾಶಕ್ಕೆ ತರುವುದರ ಮೂಲಕ ನಮ್ಮನ್ನು ವಿದ್ಯಾವಂತರನ್ನಾಗಿ ಮಾಡಿ ನಮಗೆ ಉತ್ತಮ ಸಂಸ್ಕಾರಗಳನ್ನು ಕೊಟ್ಟು ಜನ್ಮಸಾಫಲ್ಯವನ್ನು ಪಡೆಯಲು ಅವಕಾಶಮಾಡಿ ಕೊಟ್ಟಿದ್ದಕ್ಕೆ ಕೃತಜ್ಞತೆಯನ್ನು ಸೂಚಿಸಲು ಮತ್ತು ನಮಗೆ ದೈವದತ್ತವಾದ ಆಯುರೈಶ್ವರ್ಯಗಳನ್ನು ಸಂರಕ್ಷಿಸಿಕೊಳ್ಳುವುದೇ ಆಗಿದೆ.

ಈ ಚರಿತ್ರ ಲೇಖನಕ್ಕೆ ವಿಷಯವಾದವರು ಕೇವಲ ಆಚಾರ್ಯರಷ್ಟೇ ಅಲ್ಲ ಜನ್ಮಕೊಟ್ಟವರೂ ಆಗಿದ್ದಾರೆ. ನಮ್ಮ ವಂಶಪರಂಪರೆಯಲ್ಲಿ ಪ್ರಾಯಶಃ ಎಲ್ಲರೂ ಜ್ಞಾನಾನುಷ್ಠಾನಸಂಪನ್ನರಾದ ಪ್ರಯುಕ್ತ ಪಿತಾಪುತ್ರಭಾವವೆಂಬ "ತಿರುಮೇನಿ ಸಂಬಂಧ" ಮತ್ತು ಸಂಸ್ಕಾರಾದಿಗಳನ್ನು ಕೊಟ್ಟು ಶಿಷ್ಯಾಚಾರ್ಯ ಭಾವವೆಂಬ "ತಿರುವಡಿಸಂಬಂಧ" ಎಂಬ ಎರಡು ಅಂಶಗಳೂ ಬಂದಿವೆ. ಆದಕಾರಣ ನಮ್ಮ ಶೀರ್ಘರೂಪರದರ ಚರಿತ್ರೆಯನ್ನು ಇವರ ಶತಮಾನೋತ್ಸವದ ಸಂದರ್ಭದಲ್ಲಿ ಪ್ರಕಾಶಪಡಿಸಿ ಇವರ ಅನುಗ್ರಹಕ್ಕೆ ಪಾತ್ರರಾಗಿ ಸಂತೋಷಿಸಬೇಕೆಂದು ನಮ್ಮ ವಿಜ್ಞಾಪನೆ.

ಭವದೀಯ :

**ವಿದ್ವಾನ್ ಸೋ. ರಾಮಸ್ವಾಮಿ ಐಯ್ಯಂಗಾರ್ಯರು**

ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ಕ್ರತುನಾಥಮಹಾದೇಶಿಕಾಯ ನಮಃ
ಶ್ರೀಮತೇ ಜನಾರ್ದನಾರ್ಯಗುರವೇ ನಮಃ

## ಆಚಾರ್ಯರ ವೈಭವ

**ಪ್ರವೇಶ :-**

ಶ್ರಿಯಃಪತಿಯಾದ ಸರ್ವೇಶ್ವರನು
ಸಾಕ್ಷಾನ್ನಾರಾಯಣೋ ದೇವಃಕೃತ್ವಾ ಮರ್ತ್ಯಮಯೀಂ ತನುಂ ।
ಮಗ್ನಾನ್ ಉದ್ಧರತೇ ಲೋಕಾನ್ ಕಾರುಣ್ಯಾತ್ ಶಾಸ್ತ್ರಪಾಣಿನಾ ॥

ಎಂಬಂತೆ ಜನ್ಮ-ಜರಾ-ಮರಣಗಳೆಂಬ ಸಂಸಾರ ಮರುಭೂಮಿಯಲ್ಲಿ ಅಲೆದಾಡಿ ಪರಿಶ್ರಾಂತರಾದ ಜೀವಾತ್ಮರಿಗೆ ತನ್ನಲ್ಲಿ ಮೂಡುವ ಭಕ್ತಿಯೆಂಬ ಅಮೃತ ವಾಹಿನಿಯಲ್ಲಿ ಮಿಂದು ಶ್ರಮ ಪರಿಹಾರವಾಗಲೆಂದು ಶಾಸ್ತ್ರವೆಂಬ ಹಸ್ತವನ್ನು ನೀಡಿ ಭಕ್ತಿಯನ್ನು ಉಂಟುಮಾಡಿ ಉದ್ಧರಿಸುತ್ತಾನೆ ಎಂಬುದನ್ನು ನಾವೆಲ್ಲರೂ ಒಪ್ಪಬೇಕಾದದ್ದೆ.

ಇದಕ್ಕಾಗಿ ಸಾಂಗೋಪಾಂಗವಾದ ವೇದಶಾಸ್ತ್ರ ಪುರಾಣಾದಿಗಳನ್ನು ಮಹರ್ಷಿಗಳು ಮತ್ತು ಮನು ವ್ಯಾಸ ಪರಾಶರ ವಾಲ್ಮೀಕಿ ಮುಂತಾದವರ ಮೂಲಕ ಪ್ರವರ್ತಿಸಿ ಅದೂ ಅಕಿಂಚಿತ್ಕರವಾಗಲು ತಾನೇ ಸಾಕ್ಷಾತ್ತಾಗಿ ಅವ ತರಿಸಿ ಅಮಾನುಷವೂ ಅತಿಮಾನುಷವೂ ಆದ ಕಾರ್ಯಗಳನ್ನು ಮಾಡಿತೋರಿಸಿ ದರೂ "ಪರಂಭಾವಮಜಾನನ್ತಃ" "ಅವಜಾನಂತಿ ಮಾಂ ಮೂಢಾಃ" ಎಂಬಂತೆ ಆ ದಿವ್ಯಾವತಾರಗಳೂ ಕಾಲಕಳೆದಂತೆ ವಿಫಲವಾಗಿ ಶೋಕಿಸು ವಂತಾಗಲು ಸಜಾತೀಯರಲ್ಲಿ ಅವತರಿಸಿ ಅವರೊಡನೆ ಕಲೆತು, ಅವರುಗಳನ್ನು ಸನ್ಮಾರ್ಗಕ್ಕೆ ಒಯ್ಯುವುದು ಉತ್ತಮವೆಂದೆಣಿಸಿ ಶ್ರೀಪರಾಂಕುಶ ಪರಕಾಲ ಯತಿರಾಜರೇ ಮೊದಲಾದ ಆಳ್ವಾರ್ ಆಚಾರ್ಯರನ್ನು ಅವತರಿಸುವಂತೆ ಮಾಡಿ ಅವರಿಂದ ಲೋಕವು ಉಜ್ಜೀವಿಸುವಂತೆ ಮಾಡಿದರೂ ಆಗಾಗ ಆಚಾರ್ಯರುಗಳನ್ನು ಅವತರಿಸುವಂತೆ ಮಾಡಬೇಕೆಂದು ಸಂಕಲ್ಪಿಸಿ ಒಂದೊಂದು ಕಾಲವಿಶೇಷಗಳಲ್ಲಿ ಉತ್ತಮೋತ್ತಮ ಗುಣಗಣ ಸಂಪನ್ನರಾದ ಆಚಾರ್ಯ

ಸಾರ್ವಭೌಮರನ್ನು ಅವತರಿಸುವಂತೆ ಮಾಡಿ ಲೋಕೋದ್ಧಾರವನ್ನು ಮಾಡು ತ್ತಿರುವುದು ಆಯಾಯಾ ಅವತಾರಕಾಲದಲ್ಲಿದ್ದ ಕೆಲವರಿಗೆ ತಿಳಿದಿದ್ದ ವಿಷಯ.

## ಭಗವದ್ರಾಮಾನುಜರ ಅವತಾರ

ಈ ಹಿಂದೆ ನಿರೂಪಿಸಿದ ಪ್ರಕಾರ ಕಲಿಯುಗದ 4118 ವರ್ಷಗಳು ಕಳೆದು 4119ನೆಯ ಶಾಲಿವಾಹನ ಶಕಾಬ್ದ 940ನೆಯ ಕ್ರಿಸ್ತಾಬ್ದ 1017 ನೆಯ ಪಿಂಗಳವರ್ಷ-ಮೇಷಮಾಸ-ಆರ್ದ್ರಾನಕ್ಷತ್ರದಲ್ಲಿ ತಮಿಳುನಾಡಿಗೆ ಸೇರಿದ ತುಂಡೀರಮಂಡಲಾನ್ತರ್ಗತವಾದ ಶ್ರೀ ಪೆರುಂಬದೂರ್ ಎಂಬ ಅಗ್ರಹಾರದಲ್ಲಿ ನೆಲಸಿದ್ದ ಮಹಾಯಾಜ್ಞಿಕರೂ, ಮಹಾದ್ವೈಷಭಕ್ತರೂ, ಪರಿಶುದ್ಧಾಂತರಂಗರೂ ಆದ ಆಸೂರಿಕುಲತಿಲಕರಾದ ಶ್ರೀ ಕೇಶವ ಸೋಮಯಾಜಿಗಳಿಗೆ ಶ್ರೀಶೈಲ ಪೂರ್ಣರ ಸೋದರಿಯಾದ ಕಾಂತಿಮತಿಯಲ್ಲಿ ಭಗವದ್ರಾಮಾನುಜಾಚಾರ್ಯರಾಗಿ ಅವತರಿಸಿ ದರ್ಶನ ಸ್ಥಾಪಕ ಪರಮಾಚಾರ್ಯರೆನಿಸಿಕೊಂಡರು.

## ನಮ್ಮ ಕುಲಕೂಟಸ್ಥರಾದ ಶ್ರೀರಾಮಮಿಶ್ರರ ಅವತಾರ

ರಾಮಾನುಜರ ಸೋದರಿಯೂ, ಶ್ರೀಕೇಶವ ಸೋಮಯಾಜಿಗಳ ಪುತ್ರಿಯೂ ಆದ ಶ್ರೀಮಂಗವಲ್ಲಿಯಾರ್ ಅವರಲ್ಲಿ ತುಂಡೀರಮಂಡಲಾಂಗರ್ತ ವಾದ ತಿರುವಹೀಂದ್ರಪುರಕ್ಕೆ ಸಮೀಪದಲ್ಲಿರುವ ಶ್ರೀಮಂಗಲವೆಂಬ ಅಗ್ರಹಾರ ದಲ್ಲಿ ವೇದವಿದ್ಯಾವ್ರತಸ್ನಾತರೂ ಸಾಂಗೋಪಾಂಗ ವೇದಶಾಸ್ತ್ರಪಾರಂಗತರೂ ಸದಾಚಾರ ಸಂಪನ್ನರೂ, ಭಗವದ್ಭಕ್ತರೂ, ಮಹಾಶ್ರೋತ್ರಿಯರೂ ಅತ್ರಿ ಮಹರ್ಷಿಗಳ ಸಂತಾನದಲ್ಲಿ ಜನಿಸಿದವರೂ ಆದ ಯಜ್ಞದೀಕ್ಷಿತರನ್ನು "ಸರ್ವಕ್ರತು ದೀಕ್ಷಿತ"ರೆಂದೂ "ಆತ್ರೇಯ ಯಜ್ಞದೀಕ್ಷಿತರೆಂದೂ ಕರೆಯು ತ್ತಿದ್ದರು. ಇವರಿಂದ ಹಿಂದೆ ನಿರ್ದೇಶಿಸಿರುವ ಮಂಗಲವಲ್ಲಿಯಾರಲ್ಲಿ 952ನೇ ವರ್ಷ ಅಂದರೆ ಕಲಿಯುಗಾದಿ 4146ನೆಯ, ಶಾಲಿವಾಹನ ಶಕ 946ನೆಯ, ಕ್ರಿ.ಶ. 1040ನೆಯ ಭಾವವರ್ಷದ ಮಿಥುನಮಾಸ ಶುಕ್ಲ ಸಪ್ತಮಿಯ ಪೂರ್ವ ಫಾಲ್ಗುಣೀ ನಕ್ಷತ್ರದಲ್ಲಿ ಶ್ರೀರಾಮಮಿಶ್ರರು ಅವತರಿಸಿ ದರು.

## ನಾಮಕರಣ

ನಂತರ ಭಗವದ್ರಾಮಾನುಜಾಚಾರ್ಯರು ತಮ್ಮ ಸೋದರಳಿಯಂದಿರ ಸರ್ವಲಕ್ಷಣ ಸಂಪನ್ನತೆಯನ್ನೂ ಗಾಂಭೀರ್ಯವನ್ನೂ ಅನ್ಯಾದೃಶವಾದ ತೇಜಸ್ಸನ್ನೂ ಗಮನಿಸಿ ಈ ಮಗುವಿನ ತಾಯಿತಂದೆಗಳು ಶ್ರೀರಾಮಚಂದ್ರನ ಗುಣಗಣಶ್ರವಣಕೀರ್ತನದಲ್ಲಿ ಯಾವಾಗಲೂ ಮಗ್ನರಾಗಿರುವುದನ್ನು ಕಂಡು "ರಾಮಮಿಶ್ರ" ಎಂಬುದಾಗಿ ನಾಮಕರಣವನ್ನು ಮಾಡುವಂತೆ ಸೂಚಿಸಿದರು. ಆ ಪ್ರಕಾರ ನಾಮಕರಣವೂ ಆಯಿತು.

## ಶಾಸ್ತ್ರಾಭ್ಯಾಸ

ಶರಚ್ಚಂದ್ರನಂತೆ ಆಹ್ಲಾದಕರರಾಗಿ ಬೆಳೆದ ಶ್ರೀರಾಮಮಿಶ್ರಾಚಾರ್ಯರಿಗೆ ಬಾಲಭಾವದಲ್ಲಿರಬೇಕಾದ "ಬಾಲಸ್ತಾವತ್ ಕ್ರೀಡಾಸಕ್ತಃ" ಎಂಬಂತೆ ಆಟ ಪಾಟಗಳಲ್ಲಿ ಅಭಿರುಚಿ ಇರದೆ ಭಗವದ್ಗುಣಾಕರ್ಣನದಲ್ಲಿ ಅತೀವ ಆಸಕ್ತಿ ಇದ್ದಿತು. ಈ ರೀತಿಯಲ್ಲಿದ್ದ ಇವರಿಗೆ ತಮ್ಮ ತಂದೆಯವರಲ್ಲೇ ಉಪನಯನ ಪಂಚಸಂಸ್ಕಾರಗಳನ್ನು ಪಡೆದು ಸಾಂಗವೇದಾಧ್ಯಯನವನ್ನು ಮಾಡಿ ನ್ಯಾಯ ವ್ಯಾಕರಣ ಅಲಂಕಾರ ಮೀಮಾಂಸಾ ವೇದಾಂತಶಾಸ್ತ್ರಗಳನ್ನೂ ಅಭ್ಯಸಿಸಿದರು.

## ಭಗವದ್ರಾಮಾನುಜರನ್ನು ಆಚಾರ್ಯರನ್ನಾಗಿ ವರಿಸುವಿಕೆ

ಅನಂತರ ವೇದಾಂತಾರ್ಥ ವಿಶೇಷಗ್ರಹಣಕ್ಕಾಗಿ ಶ್ರೀಮಂಗಲಾಗ್ರಹಾರ ದಿಂದ ಶ್ರೀರಂಗಕ್ಕೆ ದಯಮಾಡಿಸಿ ಅಲ್ಲಿ ನೆಲೆಸಿದ್ದ ತಮ್ಮ ಸೋದರ ಮಾವಂದಿರಾದ ಭಗವದ್ರಾಮಾನುಜರನ್ನು ಆಚಾರ್ಯರನ್ನಾಗಿ ವರಿಸಿದರು. ಆಗ ಶ್ರೀರಾಮಮಿಶ್ರಾಚಾರ್ಯರ ಅಸನ್ಯಸಾಮಾನ್ಯವಾದ ಮೇಧಾವಿಲಾಸ ವನ್ನೂ ತಮ್ಮಲ್ಲಿ ಇರುವ ಮನೋಭಾವ ವೈಶಿಷ್ಟ್ಯವನ್ನೂ ಕಂಡು ಹಿಗ್ಗಿದ ಭಗವದ್ರಾಮಾನುಜರು ತಾವು ಪರಿಷ್ಕರಿಸಿದ ವ್ಯಾಸ ಬೋಧಾಯನಾದಿಗಳಿಂದ ಪರಂಪರೆಯಾಗಿ ಬಂದು ವಿಶಿಷ್ಟಾದ್ವೈತ ಉಪನಿಷತ್ ಸಿದ್ಧಾಂತವನ್ನು ಆಸೇತು ಹಿಮಾಚಲ ಪ್ರಚುರಪಡಿಸಿ ಪ್ರತಿಷ್ಠಿಸಲು ಸಮರ್ಥ ವ್ಯಕ್ತಿಯೆಂದು ಭಾವಿಸಿ ವಿಶಿಷ್ಟಾದ್ವೈತ ಸಿದ್ಧಾಂತ ಸಾಮರ್ಥ್ಯವನ್ನು ಪಡೆಯಲೆಂದು ಆಶೀರ್ವದಿಸಿ ತಾವು ಬರೆದ ಶ್ರೀಭಾಷ್ಯ ಭಗವದ್ವಿಷಯಗಳ ಸಿದ್ಧಾಂತ ರಹಸ್ಯ ಗಳನ್ನು ಉಪದೇಶಿಸಿದರು.

## ಶ್ರೀರಾಮಮಿಶ್ರರು ಭಗವತ್ಪಾರಿಷದರ ಅಂಶದಿಂದ ಜನಿಸಿರುವರೆಂಬ ಭಾವನೆ

ತರುವಾಯ ಇವರಲ್ಲಿದ್ದ ವಿಷ್ಕೃಷ್ಟವಾದ ಶಾಸ್ತ್ರಜ್ಞಾನವನ್ನು ಕಂಡು ಬೆರಗಾದ ವಿದ್ವದ್ವರೇಣ್ಯರು ಭಗವದ್ರಾಮಾನುಜರನ್ನು ಹೇಗೆ ಆದಿಶೇಷನ ಅವತಾರವೆಂದೂ ವಿಷ್ವಕ್ಸೇನನ ಅವತಾರವೆಂದೂ ಪಂಚಾಯುಧಾವತಾರ ವೆಂದೂ ನಮ್ಮಾಳ್ವಾರ್‌ರ ಅವತಾರವೆಂದೂ ಹೇಳುವಂತೆ ನಮ್ಮ ಕುಲಕೂಟಸ್ಥ ರಾದ ಶ್ರೀರಾಮಮಿಶ್ರಾಚಾರ್ಯರನ್ನು ಪರಮಾತ್ಮನ ಶೇಷಭೂತರಾದ ವನ ಮಾಲಾಂಶಸಂಭೂತರೆಂದೂ ಮಧುರಕವಿಗಳ ಅವತಾರವೆಂದೂ ಉಲ್ಲೇಖಿಸು ತ್ತಿದ್ದರು.

## ಆಚಾರ್ಯಾಧೀನತೆಯ ವಿಶೇಷ ಪ್ರಚಾರ

ಆ ಕಾಲಕ್ಕೆ ಸರಿಯಾಗಿ ಚಾರ್ವಾಕ-ಬೌದ್ಧ-ಸಾಂಖ್ಯ ಪ್ರಕ್ರಿಯಾನು ಯಾಯಿಗಳ ಸಿದ್ಧಾಂತಕ್ಕೆ ಸಿಲುಕಿ ಮಾಯಾವಾದವೇ ಪ್ರಪಂಚದಲ್ಲಿ ವ್ಯಾಪಿಸುತ್ತಿರಲು ನಮ್ಮ ಶ್ರೀ ರಾಮಮಿಶ್ರಾಚಾರ್ಯರು ಭಗವದ್ರಾಮಾನುಜರ ಅಪ್ಪಣೆ ಮೇರೆಗೆ ಆಸೇತು ಹಿಮಾಚಲ ಸಂಚರಿಸಿ ಜಗತ್ ಸತ್ಯತ್ವದ ಸ್ಥಾಪನೆ ಯನ್ನು ನಮ್ಮಾಳ್ವಾರರಿಂದ ಪ್ರಚಾರಕ್ಕೆ ಬಂದ ಪ್ರಪತ್ತಿ-ಶಾಸ್ತ್ರಾರ್ಥವನ್ನೂ ಆಚರಣೆಗೆ ತಂದಿದ್ದಲ್ಲದೆ ಶಿಷ್ಯರಿಗೆ ಆಚಾರ್ಯರಲ್ಲಿ ಇರಬೇಕಾದ ಆಚಾರ್ಯಾ ಧೀನತೆಯ (ಪಾರತಂತ್ರ್ಯ) ಪರಾಕಾಷ್ಠೆಯನ್ನು ಜನಸಾಮಾನ್ಯರಿಗೆ ತಿಳಿಸಲು ''ವೇರುನ್ನುಂ ನಾನರಿಯೇನ್'' ಎಂಬುದಾಗಿ ಹೇಳಿದ ಮಧುರ ಕವಿಗಳಂತೆ ಭಗವದ್ರಾಮಾನುಜಾಚಾರ್ಯರ ಪಾದಾರವಿಂದಗಳನ್ನು ಬಿಟ್ಟು ನಮಗೆ ಬೇರೆ ಆಶ್ರಯವಿಲ್ಲವೆಂಬ ಭಾವನೆಯನ್ನೂ ಬೆಳಸಿದರು.

## ಭಗವದ್ರಾಮಾನುಜರು ತಮ್ಮ ಶ್ರೀಭಾಷ್ಯಕ್ಕೆ ವ್ಯಾಖ್ಯಾನ ಬರೆಯುವ ಬಗ್ಗೆ ಆದೇಶ

ಈ ರೀತಿಯಲ್ಲಿ ಭಗವದ್ರಾಮಾನುಜಸಿದ್ಧಾಂತ ಕಾಲಕ್ಷೇಪ ಚತುರ ರಾದ ಇವರ ಗ್ರಂಥಾರ್ಥ ನಿರ್ವಾಹ ಸಾಮರ್ಥ್ಯವನ್ನು ಕಂಡ ಭಗವದ್ರಾ ಮಾನುಜರು ತಮ್ಮ ಬ್ರಹ್ಮಸೂತ್ರ ಭಾಷ್ಯವಾದ ''ಶ್ರೀ ಭಾಷ್ಯಕ್ಕೆ ವ್ಯಾಖ್ಯಾನ

ವನ್ನು ಬರೆಯಬೇಕೆಂದು ಆಜ್ಞಾಪಿಸಿದರು. ಅವರ ಆಜ್ಞೆಯಂತೆ ಶ್ರೀಭಾಷ್ಯ ವಿವರಣಂ'' ಎಂಬ ವ್ಯಾಖ್ಯಾನವನ್ನು ರಚಿಸಿದರು. ಇದನ್ನು ಪ್ರಮಾಣ ವನ್ನಾಗಿ ಇಟ್ಟುಕೊಂಡು ಈಚೆಗೆ ಸಿದ್ಧಾಂತ ಪ್ರಚಾರಮಾಡಿದ ಆಚಾರ್ಯರೂ ಪುರಸ್ಕರಿಸಿದರೆಂದು ಶ್ರೀಮನ್ನಿಗಮಾಂತ ಮಹಾದೇಶಿಕರು ಅಲ್ಲಲ್ಲಿ ಉಲ್ಲೇಖಿಸುವುದರಿಂದ ವ್ಯಕ್ತವಾಗಿದೆ.

ಇದೂ ಅಲ್ಲದೇ ಶ್ರೀಮನ್ನಿಗಮಾಂತ ಮಹಾದೇಶಿಕರು ತಮ್ಮ ''ಯತಿ ರಾಜವಿಂಶತಿ''ಯಲ್ಲಿ ''ಶ್ರೀ ರಾಮಮಿಶ್ರಾಚಾರ್ಯರನ್ನು ಶ್ರೀ ಭಾಷ್ಯಕಾರರ ಪಾದಗಳೆಂದು ''ಯತೀಂದ್ರ ಚರಣಮ್'' ಎಂಬ ಮಾತಿನಿಂದ ಹೇಳಿದ್ದಾರೆ ಎಂದು ನಮ್ಮ ಹಿರಿಯರು ಹೇಳುತ್ತಿದ್ದುದನ್ನು ಕೇಳಿರುತ್ತೇವೆ.

## ಶ್ರೀರಾಮಮಿಶ್ರರ ಸೋಮಯಾಗಾನುಷ್ಠಾನ

ಇಂತಹ ಮಹನೀಯರು ಶ್ರೀರಂಗದಲ್ಲಿನ ಕಾವೇರಿ ತೀರದಲ್ಲಿ ತಮ್ಮ ಸೋದರ ಮಾವಂದಿರಾದ (ಪೂರ್ವಾಶ್ರಮದಲ್ಲಿ) ಭಗವದ್ರಾಮಾನುಜರ ಸಾನ್ನಿಧ್ಯದಲ್ಲೇ ಶ್ರೌತ ಪ್ರಕ್ರಿಯೆಯನ್ನನುಸರಿಸಿ ಯಾವ ಲೋಪವೂ ಬಾರ ದಂತೆ ಸೋಮಯಾಗವನ್ನು ಅನುಷ್ಠಿಸಿದರು.

## ಭಗವದ್ರಾಮಾನುಜರು ಬಿರುದು ನೀಡಿದ್ದು

ತರುವಾಯ ಭಗವದ್ರಾಮಾನುಜರು ಇವರಿಗೆ ''ಸೋಮಾಶಿಯಾಂಡಾರ್'' ಅಥವಾ ''ಸೋಮಯಾಜಿಯಾಂಡಾರ್'' ಎಂದು ತಮಿಳ್ ಭಾಷೆಯಲ್ಲಿ ''ಕ್ರತುನಾಥಾರ್ಯ'' ಎಂದು ಸಂಸ್ಕೃತದಲ್ಲೂ ನಾಮಕರಣ ಮಾಡಿ ಆಶೀರ್ವದಿಸಿ ದರು.

## ಭಗವದ್ರಾಮಾನುಜರು ಶ್ರೀರಾಮಮಿಶ್ರರನ್ನು ಉಭಯ ಸಿಂಹಾಸನಾಧಿಪತ್ಯದಲ್ಲಿ ಪ್ರತಿಷ್ಠಾಪಿಸಿದ್ದು

ಮತ್ತೆ ಇವರಲ್ಲಿ ಕಂಡುಬಂದ ಬ್ರಹ್ಮಸೂತ್ರ ಭಾಷ್ಯ ಭಗವದ್ವಿಷಯ ಗ್ರಂಥಗಳ ಕಾಲಕ್ಷೇಪ ಹೇಳುವ ವೈಖರಿಯನ್ನು ಆಲಿಸಿ ಶ್ರೀಭಾಷ್ಯ ಭಗವದ್ವಿಷಯೋಭಯ ಸಿಂಹಾಸನಾಧಿಪತ್ಯದಲ್ಲಿ ಸ್ಥಾಪಿಸಿದರು. ಆದುದ ರಿಂದಲೇ ನಮ್ಮಗಳವರೆಗೂ ಭಗವದ್ವಿಷಯ ಕಾಲಕ್ಷೇಪದಲ್ಲಿ ನಮ್ಮ

ವಂಶೀಯರನ್ನು ಬಿಟ್ಟು ನಿಕ್ಕ ಆಚಾರ್ಯರ ಸಂಬಂಧವಿಲ್ಲ.

## ಶ್ರೀರಾಮಮಿಶ್ರರ ಯಾದವಾದ್ರಿ ಪ್ರಯಾಣ

ಹೀಗೆ ಆಚಾರ್ಯರಿಂದ ಆಶೀರ್ವಾದ ಪಡೆದು ಶ್ರೀ ಮಂಗಲಾಗ್ರಹಾರಕ್ಕೆ ತೆರಳಿದ್ದರು. ಕಾಲಕ್ರಮದಲ್ಲಿ ಚೋಳೋಪದ್ರವದಿಂದ ಕರ್ನಾಟಕಕ್ಕೆ ಭಗವದ್ರಾಮಾನುಜರು ದಯಮಾಡಿಸಲು, ಶ್ರೀ ರಾಮಮಿಶ್ರಾಚಾರ್ಯರೂ "ದಕ್ಷಿಣದ ಬದರಿ" ಎನಿಸಿಕೊಂಡ ಯಾದವಾದ್ರಿ ಅಥವಾ ಮೇಲುಕೋಟೆಗೆ ದಯಮಾಡಿಸಿದರು. ಇಲ್ಲೇ ನೆಲಸಿರಬೇಕೆಂದು ಭಗವದ್ರಾಮಾನುಜರ ಆಜ್ಞೆಯಾದ ಕಾರಣ ಅದನ್ನು ಶಿರಸಾವಹಿಸಿ ಅಲ್ಲೇ ನೆಲಸಿ ಭಗವದ್ರಾಮಾನುಜಾಚಾರ್ಯರು ನಡೆಸಿಕೊಂಡು ಬಂದ ಕೈಂಕರ್ಯವು ಅವ್ಯಾಹತವಾಗಿ ನಡೆಯುವಂತೆ ಮಾಡಿ ಧನುರ್ಮಾಸದ ಮೊದಲನೇ ದಿನವಾದ "ಪಲ್ಲಾಂಡು ತೊಡಕ್ಕಂ" ಎಂಬ ಕೈಂಕರ್ಯವನ್ನು ಇವರು ನೆರವೇರಿಸುತ್ತಾ ಬಂದು ಕಾಲಕ್ರಮದಲ್ಲಿ ಇವರ ವಂಶೀಯರಾದ ನಾವೂ ಸಹ ಈ ಕೈಂಕರ್ಯವನ್ನು ಮಾಡುತ್ತಾ ಬಂದಿರುವೆವು. ಈ ಶ್ರೀರಾಮಮಿಶ್ರಾಚಾರ್ಯರಿಗೆ ಏಳನೇಯವರಾಗಿದ್ದು ಸರ್ವಶಾಸ್ತ್ರ ಸಂಚರಿಷ್ಣು ಪಂಚಾನನರೆಂದು ಕೊಂಡಾಡಲ್ಪಟ್ಟ ಆತ್ರೇಯ ಶ್ರೀ ಮೇಘನಾದಾರಿಸೂರಿಗಳು ಇದೇ ಯಾದವಾದ್ರಿಯಲ್ಲಿ ಇದ್ದರು. ಇವರು ಶ್ರೀಮನ್ನಿಗಮಾಂತ ಮಹಾದೇಶಿಕರಿಗಿಂತ ಹಿರಿಯರು. ಇವರ "ನಯದ್ಯುಮಣಿ" ಎಂಬ ಗ್ರಂಥದಲ್ಲಿ ಲಕ್ಷ್ಮೀದೇವಿಗೆ ಜೀವಕೋಟಿಯಲ್ಲಿ ಪ್ರವೇಶವಿರುವಂತೆ ತೋರುತ್ತೆ. ಆದರೆ ಆ ಅಂಶವು ಯಾವುದೋಕಾಲದಲ್ಲಿ ಯಾರಿಂದಲೋ ಪ್ರಕ್ಷಿಪ್ತವಾಗಿರಬೇಕೆಂದು ಹಿರಿಯರು ಹೇಳುತ್ತಿದ್ದರು.

## ಆಚಾರ್ಯರ ಅರ್ವಾಚೀನರು ಯಾದವಾದ್ರಿಯಿಂದ ಬೇರೆಡೆಗೆ ತೆರಳಿದ್ದು

ಈ ರೀತಿ ಕೆಲವು ಶತಮಾನಗಳು ಕಳೆದ ಮೇಲೆ ಇವರ ಪರಂಪರೆಯವರು ಮೇಲುಕೋಟೆಯಲ್ಲಿ ವಾಸಿಸುತ್ತಿದ್ದು.ಮುನ್‌ಶೋಳಿಗಳ ಉಪದ್ರವದಿಂದ ಭಗವತ್ ಕೈಂಕರ್ಯಕ್ಕೆ ಅಡ್ಡಿಯುಂಟಾಗಲು ಆ ಮೇಲುಕೋಟೆಯನ್ನು ಬಿಟ್ಟು ಹುಲ್ಲುಗುಂಡಿ ಗ್ರಾಮ, ಬೈಲಪಳ್ಳಿ ತೊರೆಪಳ್ಳಿ ಶಾಂತಿಗ್ರಾಮ ಮತ್ತು

ನುಗ್ಗೇಹಳ್ಳಿ (ವಿಜಯ ಸೋಮನಾಥಪುರ) ಮೊದಲಾದ ಅಗ್ರಹಾರಗಳಿಗೆ ಬಂದು ಸೇರಿದರು.

## ವಿಜಯ ಸೋಮನಾಥಪುರವೆಂಬ ನುಗ್ಗೆಹಳ್ಳಿ ಅಗ್ರಹಾರದ ನಿರ್ಮಾಣ

ಈ ವಿಜಯ ಸೋಮನಾಥಪುರವೆಂಬ (ನುಗ್ಗೇಹಳ್ಳಿ) ಅಗ್ರಹಾರವನ್ನು ಹೊಯ್ಸಳ ಸೋಮೇಶ್ವರ ರಾಯನ ದಂಡನಾಯಕನಾದ ಬೊಮ್ಮಣ್ಣನು ಕ್ರಿ.ಶ. **1246**ರಲ್ಲಿ ನಿರ್ಮಿಸಿ ಇಲ್ಲಿ ತ್ರಿಕೂಟ ದೇವಾಲಯವನ್ನು ಕಟ್ಟಿಸಿ, ಅಲ್ಲಿ ಚನ್ನಕೇಶವಸ್ವಾಮಿ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಹಾಗೂ ಶ್ರೀ ಗೋಪಾಲಕೃಷ್ಣ ಸ್ವಾಮಿ ಇವರುಗಳ ದಿವ್ಯ ವಿಗ್ರಹಗಳನ್ನು ಪ್ರತಿಷ್ಠೆ ಮಾಡಿ ಸಿದನೆಂದು ಶಾಸನಗಳಿಂದ ತಿಳಿದು ಬರುತ್ತದೆ.

ಹೀಗೆ ಸುಮಾರು ಮುನ್ನೂರು ವರ್ಷಗಳ ತರುವಾಯ ಕೇಶವಾಚಾರ್ಯ ರೆಂಬ ಮೌದ್ಗಲ್ಯ ಗೋತ್ರದವರಿಗೆ ಕನಸಿನಲ್ಲಿ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯು ತನ್ನ ಸೇವಕನಾಗಿರಬೇಕೆಂದು ಆಜ್ಞಾಪಿಸಲು ಅಲ್ಲಿಂದ ಮುಂದೆ ಆ ಕೇಶವಾ ಚಾರ್ಯರ ವಂಶದವರೆಲ್ಲಾ ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹನನ್ನೇ ಕುಲ ದೇವರೆಂದು ಅವನನ್ನೇ ಪೂಜಿಸಿ ಅವನಲ್ಲೇ ಪ್ರಾರ್ಥನಾದಿಗಳನ್ನು ಮಾಡಿ ಇಷ್ಟಾರ್ಥವನ್ನು ಪಡೆಯುತ್ತಿದ್ದರು. ಈಗಲೂ ಅದೇ ಪದ್ಧತಿಯಿದೆ.

## ನಮ್ಮ ಹಿಂದಿನವರನ್ನು ನುಗ್ಗೇಹಳ್ಳಿಗೆ ಕರೆತಂದದ್ದು

ಹೀಗೆ ಕೆಲವು ಕಾಲ ಕಳೆದ ಮೇಲೆ ಈ ಮೌದ್ಗಲ್ಯ ಗೋತ್ರದ ಹೆಬ್ಬಾರ್ ಅಯ್ಯಂಗಾರ್ಯರ ಪರಂಪರೆಗೆ ಸೇರಿದವರು ದೇವರ ಸೇವೆಗೆ ಹೋಗಬೇಕಾದಾಗ ಆಚಾರ್ಯರನ್ನು ಮುಂದಿಟ್ಟುಕೊಂಡು ಹೋಗುವುದು ಸೂಕ್ತ. ಆದರೆ ನಮ್ಮ ಆಚಾರ್ಯರು ಹುಲ್ಲುಗುಂಡಿ ಮೊದಲಾದ ಗ್ರಾಮಗಳಲ್ಲಿ ನೆಲೆಸಿದ್ದಾರೆ. ಅವರನ್ನು ಆಗಾಗ ಕರೆತರುವುದು ಸ್ವಲ್ಪ ಕಷ್ಟಸಾಧ್ಯವೆಂದು ಭಾವಿಸಿ ಆ ಕಡೆಯಿಂದ ಆಚಾರ್ಯರ ಎರಡು ಕುಟುಂಬಗಳನ್ನು ನುಗ್ಗೇಹಳ್ಳಿಗೆ ಆಹ್ವಾನಿಸಿ ನೆಲಸುವಂತೆ ಮಾಡಿದರು.

## ನಮ್ಮ ಪಿತಾಮಹರ ಜನನ ಮತ್ತು ಅವರ ವಿದ್ಯಾಭ್ಯಾಸ

ಈ ಪ್ರಕಾರ ಇಲ್ಲಿ ನೆಲಸಿದ್ದ ಮಹಾಚಾರ್ಯ್ಯಾಸಿಗಳೂ ಅನುಷ್ಠಾನ ಸಂಪನ್ನರೂ ಆದ ನಮ್ಮ ಪ್ರಪಿತಾಮಹರಾದ ಶ್ರೀಮನ್ನೃಸಿಂಹಾರ್ಯ ಮಹಾ ದೇಶಿಕರಿಂದ ಕ್ರಿ.ಶ. 1842ರಲ್ಲಿ ನಮ್ಮ ಪಿತಾಮಹರಾದ ಶ್ರೀ ರಾಮಮಿಶ್ರಾ ಚಾರ್ಯರು ಅವತರಿಸಿದರು. ಇವರೂ ಸಹ ತಮ್ಮ ತಂದೆಯವರಲ್ಲಿ ಉಪ ನಯನ–ಪಂಚಸಂಸ್ಕಾರಾದಿಗಳನ್ನು ಪಡೆದು ನಾಟಕಾಂತ ಸಾಹಿತ್ಯ ಮತ್ತು ನ್ಯಾಯಶಾಸ್ತ್ರ ಪ್ರಕರಣ ಗ್ರಂಥವನ್ನು ಅಭ್ಯಾಸಮಾಡಿ ವೇದಾಂತ ಶಾಸ್ತ್ರಕ್ಕೆ ಉಪಕಾರಕವಾದ ನವೀನನ್ಯಾಯ ಶಾಸ್ತ್ರದ ಉನ್ನತ ವ್ಯಾಸಂಗಕ್ಕಾಗಿ ಮೈಸೂರಿಗೆ ದಯಮಾಡಿಸಿದರು. ಮೈಸೂರಿನಲ್ಲಿ ಆಗ ಆಳುತ್ತಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರಿಂದ ಆರಂಭಿಸಲ್ಪಟ್ಟು ಹತ್ತನೇ ಚಾಮರಾಜ ಒಡೆಯರ್‌ರವರ ಪೋಷಣೆಗೆ ಸಹಾಯಕರಾಗಿದ್ದ ದಿವಾನ್ ರಂಗಾಚಾರ್ಲು ಇವರಿಂದ ಪ್ರತಿಷ್ಠಿತವಾದ ಮೈಸೂರಿನ ಶ್ರೀಮನ್ಮಹಾರಾಜ ಸಂಸ್ಕೃತ ಶಾಲೆ ಯಲ್ಲಿ ಉಪಾಧ್ಯಾಯರೂ, ಆಸ್ಥಾನ ವಿದ್ವಾಂಸರೂ ನ್ಯಾಯಶಾಸ್ತ್ರ ಪಾರಂಗತರೂ ಜನ್ಮ ಕವಿಗಳೂ ಆದ ಪಂಡಿತರತ್ನಂ ಕವಿ ವರದಾಚಾರ್ಯಸ್ವಾಮಿ ಗಳಲ್ಲಿ ಶಿಷ್ಯ ವೃತ್ತಿಯನ್ನು ಮಾಡಲು ಆರು ತಿಂಗಳು ಪ್ರತೀಕ್ಷಿಸಿದನಂತರ ಅವರ ಅನ್ಯಾದೃಶವಾದ ಕೃಪೆಗೆ ಪಾತ್ರರಾಗಿ ನ್ಯಾಯ ಶಾಸ್ತ್ರದಲ್ಲಿ ಉನ್ನತ ಮಟ್ಟದ ಜ್ಞಾನವನ್ನು ಸಂಪಾದಿಸಿದರು. ಇದೇ ಸಮಯದಲ್ಲಿ ಶೃಂಗೇರಿ ಶಾರದಾಪೀಠದ ನೃಸಿಂಹಭಾರತೀ ಶ್ರೀಗಳು (ಪೂರ್ವಾಶ್ರಮದಲ್ಲಿ) ಸಹಾ ಧ್ಯಾಯಿಗಳಾಗಿದ್ದರು.

## ನಮ್ಮ ಪಿತಾಮಹರಿಗೆ ಭದ್ರಾಚಲದಲ್ಲಿ ತಂಗಿದ್ದಾಗ ತಿರುಪ್ಪುಕ್ಕುಳಿ ಸ್ವಾಮಿಗಳ ಭೇಟಿ

ಹೀಗೆ ನ್ಯಾಯಶಾಸ್ತ್ರದ ಉನ್ನತ ವ್ಯಾಸಂಗವನ್ನು ಮುಗಿಸಿ ವಾದ ಸಾಮರ್ಥ್ಯವನ್ನು ಪಡೆದು ಅನೇಕ ವಿದ್ವತ್ ಸಭೆಗಳಲ್ಲಿ ಭಾಗವಹಿಸಿ ಸ್ವಗ್ರಾಮಕ್ಕೆ ಹಿಂದಿರುಗಿ ತಮ್ಮ ದೊಡ್ಡಪ್ಪನವರಾದ ಶ್ರೀ ಗೋಪಾಲಾಚಾರ್ಯ ಮಹಾದೇಶಿಕರಲ್ಲಿ ಉಭಯ ವೇದಾಂತ ಶಾಸ್ತ್ರಾಧ್ಯಯನ ಮಾಡಿ ಸತ್ಸಂ ಪ್ರದಾಯವನ್ನರಿತು ಅವರಲ್ಲೇ ಪ್ರಪತ್ತಿಯನ್ನು ಅನುಷ್ಠಿಸಿ ಶಿಷ್ಯೋಪದೇಶ,

ಜ್ಞಾನಪ್ರಸಾರ ಮಾಡುತ್ತಾ ತಮ್ಮ ಪರಮ ಶಿಷ್ಯರಾದ ವಿಳ್ಳುಪುರಂ ತಾಸೀಲ್ದಾರ್ ರಾಮಸ್ವಾಮಿ ಐಯ್ಯಂಗಾರ್ಯರು ತಮಿಳ್‌ನಾಡಿನ ಭದ್ರಾಚಲ ವೆಂಬ ಗ್ರಾಮದಲ್ಲಿ ಅಧಿಕಾರದಲ್ಲಿದ್ದಾಗ ಅವರೊಡನೆ ಅಲ್ಲಿಗೆ ದಯಮಾಡಿಸಿ, ತಮ್ಮ ಜೊತೆಯಲ್ಲಿ ಶಾಸ್ತ್ರ ವ್ಯಾಸಂಗಕ್ಕಾಗಿ ಬಂದ ತಮ್ಮ ಸಹೋದರರಾದ ಶ್ರೀನಿವಾಸ ಮಹಾದೇಶಿಕರಿಗೆ ಕಾಲಕ್ಷೇಪಕಾಲವನ್ನು ಬಿಟ್ಟು ಉಳಿದ ಸಮಯ ದಲ್ಲಿ ನ್ಯಾಯಶಾಸ್ತ್ರ ಪ್ರವಚನವನ್ನು ಮಾಡುತ್ತಿದ್ದರು.

## ತಮಿಳುನಾಡಿನಲ್ಲಿ ನಮ್ಮ ಪಿತಾಮಹರಿಗೆ "ತರ್ಕಸಿಂಹ" ಎಂಬ ಬಿರುದು ಬಂದದ್ದು

ಇದೇ ಸಮಯದಲ್ಲಿ ಕಾಂಚಿಮಂಡಲಕ್ಕೆ ತಿಲಕಪ್ರಾಯರಾಗಿದ್ದ ಮಹಾ ವಿದ್ವಾಂಸರೂ ಚತುಶ್ಶಾಸ್ತ್ರಧುರಂಧರರೂ ಸಾಂಗವೇದಾಧ್ಯಯನಸಂಪನ್ನರೂ ಇಪ್ಪತ್ತೊಂದು ರಾಜರಿಗೆ ಗುರುಗಳೂ ಆದ, ಮಹಾಮಹೋಪಾಧ್ಯಾಯರೂ ತಿರುಪ್ಪುಕ್ಕುಳಿ ಅಪ್ಪಾ ಎಂದು ಪ್ರಸಿದ್ಧರಾದ ಶ್ರೀಕೃಷ್ಣ ತಾತಾಚಾರ್ಯಸ್ವಾಮಿ ಗಳಿಂದ ಕಳುಹಿಸಲ್ಪಟ್ಟ ಶ್ರೀ ವಿಜಯರಾಘವಾಚಾರ್, ಕುರುಚ್ಚಿ ರಂಗಾಚಾರ್ ಎಂಬ ಇಬ್ಬರು ಶಿಷ್ಯರ ಮೂಲಕ ನಮ್ಮ ಪಿತಾಮಹರಾದ ರಾಮಮಿಶ್ರಾ ಚಾರ್ಯರ ಪರಿಚಯವನ್ನು ಹೊಂದಿ ಅವರ ಸ್ವಗ್ರಾಮವಾದ ತಿರುಪ್ಪುಕ್ಕುಳಿ ಯಲ್ಲೇ ಕೆಲ ದಿನಗಳಿದ್ದು ಅಲ್ಲಿಂದ ಕಂಚೀ ಗರುಡೋತ್ಸವ ದರ್ಶನಕ್ಕೆ ತಾತಾ ಚಾರ್ಯಸ್ವಾಮಿಗಳೊಡನೆ ದಯಮಾಡಿಸಿ ಆ ಪ್ರಾಂತ್ಯದ ಪಂಡಿತರಿಂದ "ತರ್ಕಸಿಂಹಃ" ಎಂಬ ಬಿರುದನ್ನು ಪಡೆದು ಮತ್ತೆ ತಮ್ಮ ಸ್ವಗ್ರಾಮವಾದ ಸುಗ್ಗೇಹಳ್ಳಿಗೆ ಹಿಂದಿರುಗಿ ತಮ್ಮ ಅನುಷ್ಠಾನ, ಪುರಾಣ ಪ್ರವಚನ, ಶಾಸ್ತ್ರ ಪ್ರವಚನ, ಶಿಷ್ಯೋಪದೇಶಾದಿಗಳನ್ನು ಮಾಡುತ್ತಾ ಗೃಹಸ್ಥಾಶ್ರಮದಲ್ಲಿದ್ದು ತಮ್ಮ ಕರ್ತವ್ಯನಿರತರಾಗಿದ್ದರು.

## ಕರ್ನಾಟಕದಲ್ಲಿ "ಪುರಾಣಸಿಂಹ" ಎಂಬ ಬಿರುದು ಬಂದಿದ್ದು

ಒಂದಾನೊಂದು ಸಂದರ್ಭದಲ್ಲಿ ಹಾಸನ ಜಿಲ್ಲಾ ಅರಕಲಗೂಡು ತಾಲ್ಲೂಕು ರಾಮನಾಥಪುರ ಗ್ರಾಮಕ್ಕೆ ಶಿಷ್ಯರ ಪ್ರಾರ್ಥನೆಯ ಮೇಲೆ ದಯಮಾಡಿಸಿ ಪ್ರಥಮೈಕಾದಶಿ ದಿನದಂದು ಶ್ರೀಮದ್ಭಾಗವತದ "ರುಕ್ಮಿಣೀ ಕಲ್ಯಾಣ ಘಟ್ಟ"ವ ಪ್ರವಚನವನ್ನು ಮಾಧ್ವ ಸಂಪ್ರದಾಯಸ್ಥರ ಭಾಗ

ವತೋಪನ್ಯಾಸಕ್ಕಿಂತಲೂ ಎಣೆಯಿಲ್ಲದ ರೀತಿಯಲ್ಲಿ ವೇದಾಂತಾರ್ಥಗರ್ಭಿತ ವಾಗಿ ಪ್ರವಚನ ಮಾಡುತ್ತಿರುವಾಗ ಉಡುಪಿಯ ಅಷ್ಟ ಮಠಗಳಲ್ಲೊಂದಾದ ಸುಬ್ರಹ್ಮಣ್ಯ ಮಠಾಧೀಶರು ರಾಮನಾಥಪುರದಲ್ಲಿ ಆಗಮಿಸಿ ತಂಗಿದ್ದು ಈ ಅಸ್ಖಾಲಿತವಾದ ಶ್ರೀಮದ್ಭಾಗವತ ಪ್ರವಚನವನ್ನು ಕೇಳಿದನಂತರ ಹತ್ತಿರ ದಿಂದಲೇ ಕೇಳಲು ಆಚಾರ್ಯರು ಪ್ರವಚನ ಮಾಡುತ್ತಿದ್ದ ಶ್ರೀಪಟ್ಟಾಭಿರಾಮ ಸ್ವಾಮಿ ದೇವರ ಸನ್ನಿಧಿಗೆ ದಯಮಾಡಿಸಿ ಸುಶ್ರಾವ್ಯವಾದ ಪ್ರವಚನವನ್ನು ಆಲಿಸಿ ಆನಂದಿಸಿ ತಮ್ಮ ಅಮೃತಹಸ್ತದಿಂದ ಜರೀಶಾಲು ಜೋಡಿಯನ್ನು ಒತ್ತಾಯದಿಂದ ಹೊದಿಸಿ ಗೌರವಿಸಿದರು. ಮತ್ತು "ಪುರಾಣಸಿಂಹ" ಎಂಬ ಬಿರುದನ್ನು ಅವರಿಗೆ ಸಲ್ಲಿಸಿದರೆಂದು ತಿಳಿದುಬರುತ್ತೆ.

## ನಮ್ಮ ಪಿತಾಮಹರಿಗೆ ದ್ವಿತೀಯ ವಿವಾಹ ಪ್ರಾಪ್ತಿ

ಹೀಗೆ ಕಾಲವನ್ನು ಕಳೆಯುತ್ತಿದ್ದ ನಮ್ಮ ಪಿತಾಮಹರಿಗೆ ಮೊದಲನೇ ಪಿತಾಮಹಿಯವರಲ್ಲಿ ಒಬ್ಬ ಮಹಾಮೇಧಾವಿಗಳೂ ಶಾಸ್ತ್ರಜ್ಞರೂ ಆದ ಪುತ್ರರು ಜನಿಸಿದ್ದರು. ಅವರು ಮತ್ತು ನಮ್ಮ ಪಿತಾಮಹಿಯರೂ ದೈವಾಧೀನ ರಾಗಲು ಮಹತ್ತರವಾದ ಶೋಕಕ್ಕೆ ಎಡೆಯಾಗಲು ವಿರಕ್ತರಾಗಿಯೇ ಕಾಲ ಕಳೆಯುತ್ತಿರಲು ಶಿಷ್ಯರ ಒತ್ತಾಯದಿಂದ ದ್ವಿತೀಯ ವಿವಾಹದಲ್ಲಿ ಆಸಕ್ತ ರಾದಾಗ ತಮಿಳುನಾಡಿನ ಕಡೆಯಿಂದ ಮತ್ತು ಕನ್ನಡ ನಾಡಿನ ಕಡೆಯಿಂದ ಕನ್ಯಾಪರಿಗ್ರಹ ಪ್ರಾರ್ಥನೆ ಬಂದೊದಗಲು ಯಾವ ನಾಡಿನ ಕನ್ಯಾಪರಿಗ್ರಹ ಮಾಡಬೇಕೆಂಬ ಸಂದೇಹಬರಲು ತಮ್ಮ ಆರಾಧ್ಯ ದೇವರಾದ ನುಗ್ಗೆಹಳ್ಳಿ ಶ್ರೀಲಕ್ಷ್ಮೀನರಸಿಂಹಸ್ವಾಮಿಯ ಆದೇಶದಂತೆ ಸಂಬಂಧ ಬೆಳೆಸೋಣವೆಂದು ಆಲೋಚಿಸಿ ಆ ಸಮಯದಲ್ಲಿ ನುಗ್ಗೆಹಳ್ಳಿಯ ದೇವಸ್ಥಾನದಲ್ಲಿ ಅರ್ಚಕರಾಗಿದ್ದ ಅಣ್ಣಾಜಿಭಟ್ಟರನ್ನು ಕರೆಸಿ ಈ ವಿಚಾರವನ್ನು ಶ್ರೀಲಕ್ಷ್ಮೀನರಸಿಂಹಸ್ವಾಮಿ ಯಲ್ಲಿ ಅರಿಕೆಮಾಡಿ ತಿಳಿಸಬೇಕೆಂದು ಹೇಳಲು ಅದೇ ಪ್ರಕಾರ ನಾಲ್ಕೈದು ದಿನಗಳು ಕಳೆದ ಮೇಲೆ ಆ ಅರ್ಚಕರ ಸ್ವಪ್ನದಲ್ಲಿ ಕನ್ನಡ ನಾಡಿನ ಸಂಬಂಧ ವನ್ನು ಮಾಡುವುದು ಶ್ರೇಷ್ಠವೆಂದು ಸ್ವಾಮಿಯು ಅಪ್ಪಣೆ ಕೊಡಿಸಲು ಅದೇ ಪ್ರಕಾರ ಹಾಸನ ಜಿಲ್ಲಾ ಅರಕಲಗೂಡು ತಾಲ್ಲೂಕು ರಾಮನಾಥಪುರ ನಿವಾಸಿಗಳಾಗಿದ್ದ ತೇರಿನ ಮನೆ ಜನಾರ್ದನ ಐಯ್ಯಂಗಾರ್ಯರ ಸಹೋದರಿ ಯಾದ ಶ್ರೀಮತಿ ಶ್ರೀರಂಗಮ್ಮನವರನ್ನು ವಿವಾಹವಾದರು.

## ನಮ್ಮ ಪಿತಾಮಹರಿಗೆ ನಾಲ್ವರು ಪುತ್ರರತ್ನಂ ಜನನ

ಆಮೇಲೆ ನಮ್ಮ ಪಿತಾಮಹರ 45ನೇ ವಯಸ್ಸಿನಲ್ಲಿ, ಅಂದರೆ ಕ್ರಿ. 1887ನೇ ಸರ್ವಜಿತ್ ವರ್ಷದಲ್ಲಿ ·ಸರ್ವ ಜ್ಯೇಷ್ಠರಾದ (ನಮ್ಮ ತಂದೆಯವರಿಗೆ) ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಶ್ರೀನಿವಾಸ ರಾಘವಾಚಾರ್ಯ ಸ್ವಾಮಿಗಳೂ ಮತ್ತು ಸುಮಾರು, 1889ರಲ್ಲಿ ಎರಡನೆಯವರಾದ ಶ್ರೀ॥ಉ॥ ವೇ॥ ವಿದ್ವಾನ್ ಸೋ. ನರಸಿಂಹಾಚಾರ್ಯಸ್ವಾಮಿಗಳೂ, 1891ನೆಯ ನಂದನ ಸಂವತ್ಸರದಲ್ಲಿ ನಮ್ಮ ತಂದೆಯವರಾದ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳೂ, 1894-1895ರಲ್ಲಿ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಸಂಪತ್ಕುಮಾರಾಚಾರ್ಯಸ್ವಾಮಿಗಳೂ ಜನಿಸಿದರು.

ಇವರೆಲ್ಲರೂ ತಮ್ಮ ತಂದೆಯವರಲ್ಲಿ ಉಪನಯನಾದಿ ಸಂಸ್ಕಾರ ಮತ್ತು ನಾಟಕಾಂತ ಸಾಹಿತ್ಯ ಉಪಯುಕ್ತ ವೇದಾಧ್ಯಯನ ಪ್ರಬಂಧಾಧ್ಯಯನ ಮತ್ತು ನ್ಯಾಯಶಾಸ್ತ್ರ ಪ್ರಕರಣ ಗ್ರಂಥಾಧ್ಯಯನವನ್ನು ಮಾಡಿದರು.

## ವಿದ್ಯಾಭ್ಯಾಸಕ್ಕೆ ಪುತ್ರರು ತಿರುಪತಿಗೆ ಪ್ರಯಾಣ ಬೆಳೆಸಿದ್ದು

ಇವರಲ್ಲಿ ಹಿರಿಯರಾದ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ಶ್ರೀನಿವಾಸ ರಾಘವಾಚಾರ್ಯಸ್ವಾಮಿಗಳು ಮತ್ತು ಎರಡನೆಯವರಾದ ಶ್ರೀ॥ ಉ॥ ವೇ॥ ವಿದ್ವಾನ್ ಸೋ. ನರಸಿಂಹಾಚಾರ್ಯಸ್ವಾಮಿಗಳೂ ತಿರುಪತಿಯಲ್ಲಿನ ವೆಂಕಟೇಶ್ವರ ಸಂಸ್ಕೃತ ಕಲಾಶಾಲೆಯಲ್ಲಿ ಸೇರಿ, ನ್ಯಾಯ ವೇದಾಂತಶಾಸ್ತ್ರ ಪ್ರವಚನೋಪಾಧ್ಯಾಯರೂ, ಮಹಾಮಹೋಪಾಧ್ಯಾಯರೂ ಆದ ಕಪಿಸ್ಥಲಂ ದೇಶಿಕಾಚಾರ್ಯ ಸ್ವಾಮಿಗಳಲ್ಲಿ ಪ್ರಾಚ್ಯ ನವ್ಯ ನ್ಯಾಯಶಾಸ್ತ್ರದ ಉನ್ನತ ವ್ಯಾಸಂಗವನ್ನು ಮಾಡಿದರು. ಶ್ರೀ ವಿದ್ವಾನ್ ಸೋ. ನರಸಿಂಹಾಚಾರ್ಯಸ್ವಾಮಿಗಳು ಮಾತ್ರ ಅದೇ ತಿರುಪತಿಯಲ್ಲಿ ಕಪಿಸ್ಥಲಂ ದೇಶಿಕಾಚಾರ್ಯಸ್ವಾಮಿಗಳಲ್ಲಿ ನ್ಯಾಯಶಾಸ್ತ್ರವನ್ನು, ಶ್ರೀಮುಷ್ಣಂ ಕೃಷ್ಣಾಚಾರ್ ಅವರಲ್ಲಿ ವ್ಯಾಕರಣಶಾಸ್ತ್ರವನ್ನು ವ್ಯಾಸಂಗ ಮಾಡಿ ಇಬ್ಬರೂ ಹಿಂದಿರುಗಿದರು.

## ವಿಶೇಷಾಧ್ಯಯನಕ್ಕಾಗಿ ಮೈಸೂರಿಗೆ ಮರುಪ್ರಯಾಣ

ಅಲ್ಲಿಂದ ಶ್ರೀ ಸೋ. ನರಸಿಂಹಾಚಾರ್ಯರು ಮತ್ತು ನಮ್ಮ ತಂದೆ

ಯುವವರೂ ಆದ ಶ್ರೀ ಸೋ. ಜನಾರ್ದನಾಚಾರ್ಯರು ವಿದ್ವಜ್ಜನಪೂ ವಿಹಾರ ನಗರಿಯಾದ ಮೈಸೂರಿಗೆ ಬಂದು ಶ್ರೀಮನ್ಮಹಾರಾಜ ಸಂಸ್ಕೃತ ಮಹಾ ಪಾಠಶಾಲೆಗೆ ಸೇರಿದರು. ನ್ಯಾಯ ವ್ಯಾಕರಣಶಾಸ್ತ್ರಗಳ ದಾರ್ಢ್ಯಾರ್ಥವಾಗಿ "ಬಹುಭ್ಯಃ ಶ್ರೋತವ್ಯಂ, ಬಹುಧಾ ಶ್ರೋತವ್ಯಂ" ಎಂಬುದಕ್ಕೆ ಅನುಸಾರ ವಾಗಿ ಪಂಡಿತೋತ್ತಮರಾದ ಶ್ರೀ ಕಾಡೂಶಾಸ್ತ್ರಿಗಳು ಹಾಗೂ ಅನಂತಾಚಾರ್ಯ ರಲ್ಲಿ ಸೋ ನರಸಿಂಹಾಚಾರ್ಯರು ವ್ಯಾಕರಣಶಾಸ್ತ್ರವನ್ನು ಅಭ್ಯಾಸಮಾಡಿದರು.

## ನಮ್ಮ ತಂದೆಯವರು ವಿದ್ಯಾಭ್ಯಾಸಕ್ಕೆ ಮೈಸೂರಿಗೆ ಬಂದದ್ದು

ಇಷ್ಟರಲ್ಲಿ ನಮ್ಮ ತಂದೆಯವರೂ, ನಮಗೆ ಪಂಚಸಂಸ್ಕಾರ ಮಂತ್ರೋಪದೇಶ ವ್ಯಾಕರಣಾಲಂಕಾರ ವೇದಾಂತಗ್ರಂಥಗಳ ಪ್ರವಚನ ಕಾರರೂ ಆದ ವಿದ್ವಾನ್ ಸೋ. ಜನಾರ್ದನಾಚಾರ್ಯಸ್ವಾಮಿಗಳು ಮೈಸೂರಿನ ಇದೇ ಸಂಸ್ಕೃತ ಮಹಾಪಾಠಶಾಲೆಯಲ್ಲಿ ವ್ಯಾಕರಣಶಾಸ್ತ್ರಾಧ್ಯಯನ ಮಾಡುತ್ತಾ ವ್ಯಾಕರಣ ವಿದ್ವನ್ಮಧ್ಯಮಾ ಪರೀಕ್ಷೆಯಲ್ಲಿ ಉತ್ತೀರ್ಣರಾದರು.

## ನಮ್ಮ ದೊಡ್ಡಪ್ಪನವರಿಗೆ ಆತ್ಮಕೂರ್ ರಂಗಾಚಾರ್ಯ ಸ್ವಾಮಿಗಳ ಪರಿಚಯವಾದದ್ದು

ಇದೇ ಸಮಯಕ್ಕೆ ಸರಿಯಾಗಿ, ಆತ್ಮಕೂರ್ ಆರಾಧನಂ ರಂಗಾಚಾರ್ ಎಂದು ಪ್ರಸಿದ್ಧರಾದ (1925ರಿಂದ ಅಭಿನವ ರಂಗನಾಥ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳೆಂದು ಕರೆಯಲ್ಪಡುತ್ತಿದ್ದ) ವಿದ್ವಾಂಸರು ಆತ್ಮಾಕೂರಿ ನಿಂದ ವ್ಯಾಕರಣಶಾಸ್ತ್ರಾಭ್ಯಾಸ ಮಾಡಬೇಕೆಂದು ಬಂದು ಇದೇ ಸಂಸ್ಕೃತ ಮಹಾಪಾಠಶಾಲೆಗೆ ಸೇರಿಕೊಂಡರೂ ಇವರಿಗೆ ಶಾಲೆಯ ಕೊಠಡಿಯಲ್ಲಿ ಸ್ಥಳಾವಕಾಶವಿಲ್ಲದೇ ವ್ಯಾಕರಣಂ ತಾತಾಚಾರ್ಯಸ್ವಾಮಿಗಳಲ್ಲಿ ವ್ಯಾಕರಣಶಾಸ್ತ್ರ ವನ್ನು ಅಧ್ಯಯನ ಮಾಡುತ್ತಾ, ನಮ್ಮ ದೊಡ್ಡಪ್ಪನವರಾದ ವಿದ್ವಾನ್ ಸೋ. ನರಸಿಂಹಾಚಾರ್ಯಸ್ವಾಮಿಗಳಲ್ಲಿ ಪರಿಭಾಷೇಂದು ಶೇಖರ ಗ್ರಂಥವನ್ನು ಅಧ್ಯಯನ ಮಾಡುತ್ತಿದ್ದರು. ಮತ್ತು ಸೋ. ನರಸಿಂಹಾಚಾರ್ಯಸ್ವಾಮಿಗಳು ಶ್ರೀ ಆತ್ಮಾಕೂರ್ ರಂಗಾಚಾರ್‌ಸ್ವಾಮಿಗಳಿಂದ ಏಕಾಕ್ಷರ ಹಯಗ್ರೀವ ಮಂತ್ರೋಪದೇಶವನ್ನು ಪಡೆದರು. ಇದರಿಂದಾಗಿ ಪರಸ್ಪರ ಶಿಷ್ಯೋಪಾ ಧ್ಯಾಯಿಕೆಯು ಬೆಳೆಯಿತು.

ನಂತರ ಕೆಲವು ತಿಂಗಳು ಕಳೆದಮೇಲೆ ಶ್ರೀ|| ಉ|| ವೇ|| ಆತ್ಮಾಕೂರ್ ರಂಗಾಚಾರ್ಯಸ್ವಾಮಿಗಳಿಗೆ ಇದೇ ಸಂಸ್ಕೃತ ಕಾಲೇಜಿನಲ್ಲೇ ವಿದ್ಯಾಭ್ಯಾಸಕ್ಕೆ ತಂಗಲು ಅವಕಾಶ ಸಿಕ್ಕಿತು. ಆಗ ವಿದ್ವಾನ್ ನಾವುಗುಂಡಲಂ ಶ್ಯಾಮಾಚಾರ್ಯರಲ್ಲಿ ನ್ಯಾಯಶಾಸ್ತ್ರ ಪ್ರಕರಣ ಗ್ರಂಥವನ್ನು ಅಧಿಕರಿಸಿ, ನ್ಯಾಯಶಾಸ್ತ್ರದ ವಾದ ಗ್ರಂಥಗಳನ್ನು ಅಧಿಕರಿಸಲು ಇದೇ ಸಂಸ್ಕೃತ ಕಾಲೇಜಿನಲ್ಲಿ ನ್ಯಾಯ ವೇದಾಂತಶಾಸ್ತ್ರ ಪ್ರಧಾನೋಪಾಧ್ಯಾಯರಾದ ಪಂಡಿತರತ್ನಂ ಮಹಾಮಹೋಪಾಧ್ಯಾಯಾದಿ ಪದವಿಭೂಷಿತರಾದ ಕಸ್ತೂರಿ ರಂಗಾಚಾರ್ಯರಲ್ಲಿ ಅಧಿಕರಿಸುತ್ತಿದ್ದರು. ಈ ಪ್ರಕಾರ ನಮ್ಮ ತಂದೆಯವರು, ಸೋ. ನರಸಿಂಹಾಚಾರ್ಯಸ್ವಾಮಿಗಳೂ ಸೋ. ತಿರುನಾರಾಯಣ ಐಯ್ಯಂಗಾರ್ ಸ್ವಾಮಿಗಳೂ ಆತ್ಮಾಕೂರ್ ರಂಗಾಚಾರ್ಯ ಸ್ವಾಮಿಗಳೂ ಒಂದೆಡೆಯಲ್ಲಿ ಕಲೆತು ಶಾಸ್ತ್ರ ವಿಚಾರಗಳನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತೆ.

## ತಮ್ಮ ಅಣ್ಣನವರೊಡನೆ ಮದರಾಸಿಗೆ ಪ್ರಯಾಣಮಾಡಿದ್ದು

ಹೀಗೆ ನಮ್ಮ ತಂದೆಯವರು ವ್ಯಾಕರಣ ವಿದ್ವನ್ಮಧ್ಯಮಾ ಪರೀಕ್ಷೆಯನ್ನು ಮುಗಿಸಿ ಉತ್ತರ ವಿದ್ವತ್ತಿಗೆ ಸೇರಬೇಕೆಂಬುವರೊಳಗೆ ನಮ್ಮ ದೊಡ್ಡಪ್ಪನವರಾದ ವಿದ್ವಾನ್ ಸೋ. ನರಸಿಂಹಾಚಾರ್ಯ ಸ್ವಾಮಿಗಳಿಗೆ ಮದರಾಸ್‌ನಲ್ಲಿರುವ ಕಣ್ಣನ್ ಚೆಟ್ಟಿ ಕಾಲೇಜಿನಲ್ಲಿ ಪ್ರಧಾನಾಧ್ಯಾಪಕ ಸ್ಥಾನವು ದೊರೆತದ್ದರಿಂದ ಅವರು ಅಲ್ಲಿಗೆ ಹೊರಡಲು ಅವರ ಸಹಾಯಾರ್ಥವಾಗಿ ತಾವೂ ಅವರೊಂದಿಗೆ ಅಲ್ಲಿಗೆ ತೆರಳಿದರು.

## ಮದರಾಸಿನಲ್ಲಿ ನಮ್ಮ ತಂದೆಯವರ ಪ್ರವಚನ ವೈಶಿಷ್ಟ್ಯ

ನಂತರ ನಮ್ಮ ತಂದೆಯವರಿಗೂ ಅದೇ ಕಾಲೇಜಿನಲ್ಲೇ ಸಹಾಯೋಪಾಧ್ಯಾಯ ವೃತ್ತಿ ದೊರೆಯಿತು. ಆಗ ಅಲ್ಲಿ ಪ್ರವಚನ ವಿಧಾನವನ್ನು ವೀಕ್ಷಿಸಲು ತಿರುಪತಿ ವೆಂಕಟೇಶ್ವರ ಕಲಾಶಾಲೆಯಲ್ಲಿ ಅಧ್ಯಕ್ಷರೂ ಮಹಾಮಹೋಪಾಧ್ಯಾಯರೂ ಪ್ರಾಚ್ಯ ವಿದ್ಯೇಶ್ವರ ಎಂಬ ಬಿರುದನ್ನು ಪಡೆದಿದ್ದ ಶ್ರೀ|| ಉ|| ವೇ|| ಡಿ. ಟಿ. ತಾತಾಚಾರ್ಯಸ್ವಾಮಿಗಳು ದಯಮಾಡಿಸಿ, ಪರೋಕ್ಷದಲ್ಲಿ ನಮ್ಮ ತಂದೆಯವರ ಪ್ರವಚನವನ್ನು ಕೇಳಿ ತಮ್ಮ ಸಂತೋಷವನ್ನು ವಿದ್ವಾನ್. ಸೋ. ನರಸಿಂಹಾಚಾರ್ಯರ ಅವಗಾಹನೆಗೆ ತಂದರು.

## ತಂದೆಯವರು ಮದರಾಸಿನಿಂದ ಮೈಸೂರಿಗೆ ಮರಳಿ ಬಂದದ್ದು.

ನಂತರ ಕೆಲವು ತಿಂಗಳ ಬಳಿಕ ಮೈಸೂರಿನಲ್ಲಿದ್ದ 'ಆಕಾಶಪುರಾಣಂ' ಇನ್‌ಸ್ಪೆಕ್ಟರ್ ರಂಗಾಚಾರ್ ಎಂಬುವವರು ಅದೇ ಸಮಯದಲ್ಲಿ ನಮ್ಮ ಮೈಸೂರು ಸಂಸ್ಕೃತ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿದ್ದ ಶ್ರೀ ಸಿ. ರಾಮಾನುಜಯ್ಯಂಗಾರ್ಯರು ಮತ್ತು ಇತರ ಅಧಿಕಾರಿಗಳ ಮೂಲಕ ಸೋ. ನರಸಿಂಹಾಚಾರ್ಯ ಸ್ವಾಮಿಗಳ ಪಾಂಡಿತ್ಯ ಪ್ರಕಾಂಡತೆಯನ್ನು ಅರಿತು ಮೈಸೂರಿನಲ್ಲಿರುವ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ಅವರನ್ನು ಸಂಶೋಧಕರನ್ನಾಗಿ ನೇಮಿಸಿದಾಗ ಮದ್ರಾಸಿನಿಂದ ಮೈಸೂರಿಗೆ ಮರಳಿದರು.

## ನಮ್ಮ ತಂದೆಯವರ ಚಿಂತನಾಚಾರ್ಯಕ

ನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನ ವಿದ್ವಾಂಸರೂ ಆಗಿದ್ದರು. ಇವರು ನನ್ನ ಪುರೋಭಿವೃದ್ಧಿಗೂ ಕಾರಣರಾದರು. ಆಗ ನಮ್ಮ ತಂದೆ ಯವರೂ ಸಹ ಮೈಸೂರಿಗೆ ಬಂದು ತಮ್ಮ ವ್ಯಾಕರಣ ವಿದ್ವದುತ್ತಮ ಪ್ರಾಸಂಗವನ್ನು ಮುಂದುವರೆಸಿ ಮುಗಿಸಿದರು. ನಂತರ ನ್ಯಾಯಶಾಸ್ತ್ರ ವಿದ್ವನ್ಮಧ್ಯಮಾ ಪ್ರಾಸಂಗ ಮಾಡತೊಡಗಿದರು. ಆಗ ಸುಮಾರು 15 ವಿದ್ಯಾರ್ಥಿಗಳು ವ್ಯಾಕರಣ ಹಾಗೂ ನ್ಯಾಯಶಾಸ್ತ್ರದ ಪ್ರಕರಣ ಗ್ರಂಥಗಳನ್ನು ಚಿಂತನೆಮಾಡಲು ನಮ್ಮ ತಂದೆಯವರಲ್ಲಿ ಬರುತ್ತಿದ್ದರೆಂದು ಇದೇ ಮೈಸೂರು ಸಂಸ್ಕೃತ ಕಾಲೇಜಿನಲ್ಲಿ ನನಗೆ ಅಲಂಕಾರಶಾಸ್ತ್ರದಲ್ಲಿ ಉಪಾಧ್ಯಾಯರಾಗಿದ್ದ ತಂಗವಳಿ ವಿದ್ವಾನ್ ರಾಮಾನುಜಾಚಾರ್ಯರು ಮತ್ತು ಇದೇ ಶಾಲೆಯಲ್ಲೇ ವಿಶಿಷ್ಟಾದ್ವೈತ ವೇದಾಂತ ಅಧ್ಯಾಪಕರಾಗಿದ್ದ ಶಿರದಾಂಬೂರ್ ವಿದ್ವಾನ್ ಶೇಷಾದ್ರಿ ಅಯ್ಯಂಗಾರ್ಯರು ಮತ್ತು ಮೇಲುಕೋಟೆಯ ವೇದ ವೇದಾಂತ ಬೋಧಿನೀ ಪಾಠಶಾಲೆಯಲ್ಲಿ ಪ್ರಾಂಶುಪಾಲರೂ ವ್ಯಾಕರಣಶಾಸ್ತ್ರ ಪ್ರಾಧ್ಯಾಪಕರೂ ಆಗಿದ್ದ ವಿದ್ವಾನ್ ಪಟ್ಟಿರಾಯಂ ಶ್ರೀನಿವಾಸಾಚಾರ್ಯರೂ ಆಗಾಗ ನನ್ನಲ್ಲಿ ಹೇಳುತ್ತಿದ್ದರು. ಇವರು ಇನ್ನು ಕೆಲವು ಪಂಡಿತರಿಗೂ ಚಿಂತನೆಯನ್ನು ಹೇಳುತ್ತಿದ್ದರು.

ಇನ್ನೊಂದು ವಿಶೇಷವೆಂದರೆ ನಮ್ಮ ತಂದೆಯವರ ಪ್ರವಚನ 'ಪ್ರಕಾರ ವಿಧಿ'ಯಲ್ಲಿದ್ದು ಅಸಂದಿಗ್ಧವಾಗಿರುತ್ತಿತ್ತೆಂದು ಇವರ ಚಿಂತನಾ ಶಿಷ್ಯರು ಹೇಳುತ್ತಿದ್ದುದು ನಮ್ಮ ಅನುಭವಕ್ಕೂ ಬಂದಿರುತ್ತೆ.

## ಪರಕಾಲಯತೀಂದ್ರರಿಗೆ ವಾದಸಹಾಯಕ್ಕಾಗಿ ತೆರಳಿದ್ದು

ಈ ರೀತಿಯಾದ ವಾದಶಕ್ತಿಯುಳ್ಳ ನಮ್ಮ ತಂದೆಯವರನ್ನು ಬ್ರಹ್ಮ ತಂತ್ರ ಪರಕಾಲ ಮಠದ ಶ್ರೀಗಳಾಗಿದ್ದ ಶ್ರೀ ಮದಭಿನವ ರಂಗನಾಥ ಬ್ರಹ್ಮ ತಂತ್ರ ಪರಕಾಲ ಶ್ರೀಗಳವರು (ತಮ್ಮ ಪೂರ್ವಾಶ್ರಮದಲ್ಲಿ) ಗದ್ವಾಲ್ ಸಂಸ್ಥಾನಕ್ಕೆ ತಾವು ವಾದ ಮಾಡುವ ಸಮಯದಲ್ಲಿ ಸಹಾಯಕ್ಕಾಗಿ ಕರೆದು ಕೊಂಡು ಹೋಗುತ್ತಿದ್ದರೆಂದು ತಿಳಿದುಬಂದಿದೆ.

## ಅಧ್ಯಯನ ಸಮಕಾಲದಲ್ಲಿ ಆಯುರ್ವೇದದ ಅಭ್ಯಾಸ

ಇದಲ್ಲದೇ ನಮ್ಮ ತಂದೆಯವರು ತಮ್ಮ ವ್ಯಾಸಂಗ ಕಾಲದಲ್ಲಿ ಮಧ್ಯೆ ಮಧ್ಯೆ ಅವಕಾಶ ಸಿಕ್ಕಿದಾಗ ಮೈಸೂರಿನಲ್ಲಿ ವೈದ್ಯರಾಜರೆನಿಸಿಕೊಂಡಿದ್ದ ಭೀಮಸೇನಾಚಾರ್ಯರಲ್ಲಿ ಚರಕ-ಸುಶ್ರುತ ಮೊದಲಾದ ವೈದ್ಯಗ್ರಂಥಗಳನ್ನು ಅಧ್ಯಯನಮಾಡಿ ಸಂದರ್ಭೋಚಿತ ಉಚಿತ ಚಿಕಿತ್ಸೆಯನ್ನೂ ಮಾಡು ತ್ತಿದ್ದರು.

## ವಿದ್ಯಾಭ್ಯಾಸಾನಂತರವೂ ಸ್ವಲ್ಪಕಾಲ ಮೈಸೂರಿನಲ್ಲಿ ವಾಸ

ಹೀಗೆ ತಮ್ಮ ಗಾರ್ಹಸ್ಥ್ಯವನ್ನಂಗೀಕರಿಸಿದ ಮೇಲೂ ಜ್ಞಾನ ಪ್ರಸಾರ ಮಾಡುತ್ತಾ ಕೆಲವು ವರ್ಷಗಳವರೆಗೆ ಅಂದರೆ ಕ್ರಿ. ಶ. 1930 ರವರೆಗೆ ಮೈಸೂರು ನಗರದಲ್ಲೇ (ಅಂದರೆ ತಮ್ಮ ನಲವತ್ತು ವರ್ಷಗಳವರೆಗೆ) ಜೀವನ ವನ್ನು ಸಾಗಿಸುತ್ತಿದ್ದು ಅನುಷ್ಠಾನ ಪ್ರಧಾನರಾಗಿದ್ದರು.

## ಸ್ವಗ್ರಾಮಕ್ಕೆ ಮರು ಪ್ರಯಾಣ

ಹೀಗಿರುವಾಗ ಸ್ವತಂತ್ರವಾಗಿ ಜೀವನ ಮಾಡಬೇಕೆಂಬ ಆಸೆಯಿಂದ ಸರ್ಕಾರದ ಕೆಲಸಕ್ಕೆ ಆಸೆಪಡದೆ ಸ್ವಗ್ರಾಮವಾದ ನುಗ್ಗೇಹಳ್ಳಿಗೆ ತೆರಳಿದರು. ಅಲ್ಲಿ ತಮ್ಮ ಪಾಲಿಗೆ ಬಂದ ಜಮೀನನ್ನು ನೋಡಿಕೊಂಡು ಪಾಠ ಪ್ರವಚನ ವನ್ನೂ ಮಾಡುತ್ತಾ ಸುಮಾರು 1930ರಲ್ಲಿ " ಶ್ರೀ ರಾಮಮಿಶ್ರ ಸಂಸ್ಕೃತ ವಿದ್ಯಾಶಾಲೆ"ಯನ್ನು ನಡೆಸುತ್ತಿದ್ದು 8 ವರ್ಷ ಕಾಲ ತಮ್ಮಲ್ಲಿ ಬಂದ ಶಿಷ್ಯರಿಗೆ ವಿದ್ಯೆಯನ್ನು ಹೇಳಿಕೊಡುತ್ತಿದ್ದರು. ಮತ್ತು ತಮ್ಮ ಅಣ್ಣಂದಿರಾದ ವಿದ್ವಾನ್

ಸೋ. ಶ್ರೀನಿವಾಸ ರಾಘವಾಚಾರ್ಯಸ್ವಾಮಿಗಳಲ್ಲಿ ವೇದಾಂತ ಶಾಸ್ತ್ರಾಧ್ಯಯನ ವನ್ನು ಮಾಡುತ್ತಿದ್ದರು.

## ನಮ್ಮ ತಂದೆಯವರಿಗೆ ಪ್ರಥಮ ಪತ್ನಿವಿಯೋಗ ಮತ್ತು ಆಕಾಲದಲ್ಲೂ ಗ್ರಂಥರಚನೆ

ಈ ರೀತಿ ಕಾಲಚಕ್ರವು ಉರುಳುತ್ತಿರುವಲ್ಲಿ ಕ್ರಿ.ಶ. 1931 ಪ್ರಮೋದ-ಪುಷ್ಯ–ಶುದ್ಧ ಚತುರ್ದಶಿಯಂದು ನಮ್ಮ ತಾಯಿಯವರಾದ ಶ್ರೀಮತಿ ಸೀತಮ್ಮನವರು ಪ್ಲೇಗುಪದ್ರವಕ್ಕೆ ತುತ್ತಾಗಿ ದೈವಾಧೀನರಾದರು. ಆಗ ನಮ್ಮ ಮತ್ತು ತಮ್ಮ ರಕ್ಷಣೆಯೆಲ್ಲವನ್ನೂ ನೋಡಿಕೊಂಡು ಹೋಗುತ್ತಾ 4 ವರ್ಷಗಳವರೆಗೆ ದ್ವಿತೀಯ ವಿವಾಹ ಸಂಬಂಧವು ಸಂಭವಿಸದೇ ಇರುವಷ್ಟರಲ್ಲಿ ಸುಗ್ಗೇಹಳ್ಳಿಯಲ್ಲಿ ನಡೆಯುತ್ತಿದ್ದ ಕೊತಾರೋತ್ಸವ ಸಂದರ್ಭದಲ್ಲಿ ನಮ್ಮೂರಿನ ಶ್ರೀ ಚೆನ್ನಕೇಶವದೇವರ ಪಾದಾದಿ ಕೇಶಾಂತವಾದ ವರ್ಣನೆಯ ರೂಪದಲ್ಲಿರುವ ಗದ್ಯವನ್ನು ಮತ್ತು ಶ್ರೀ ದೇವಿಯವರ ಸ್ತೋತ್ರರೂಪವಾದ "ಲಕ್ಷ್ಮೀಸ್ತುತಿ" ಎಂಬ ಗದ್ಯವನ್ನು ಬರೆದರು. ಇವೆರಡೂ ಮುದ್ರಿತವಾಗಿವೆ.

## ನಮ್ಮ ತಂದೆಯವರಿಗೆ ದ್ವಿತೀಯ ವಿವಾಹ

ಹೀಗೆ ನಾಲ್ಕು ವರ್ಷ ಕಳೆಯಲು ದ್ವಿತೀಯ ವಿವಾಹ ಕಾಲವು ಪ್ರಾಪ್ತವಾಗಲು ನಮ್ಮ ದೊಡ್ಡಪ್ಪನವರೂ ನ್ಯಾಯ–ವ್ಯಾಕರಣ ವಿದ್ವಾಂಸರೂ, ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ಉಪಪ್ರಾಂಶುಪಾಲರೂ, ನ್ಯಾಯ–ವ್ಯಾಕರಣಶಾಸ್ತ್ರ ಪ್ರಧಾನಾಧ್ಯಾಪಕರೂ ಆಗಿದ್ದ ಶ್ರೀ|| ಉ|| ವೇ|| ವಿದ್ವಾನ್ ಸೋ. ತಿರುನಾರಾಯಣ ಐಯ್ಯಂಗಾರ್ಯ ಸ್ವಾಮಿಗಳ ಪ್ರಯತ್ನದಿಂದಾಗಿ ಮದರಾಸ್ ಪ್ರಾಂತ್ಯದ ಜೋಲಾರ್‌ಪೇಟೆ ತಾಲ್ಲೂಕ್ ಕೇತಾಂಡಪಟ್ಟಿ ಅಗ್ರಹಾರವಾಸಿಗಳಾಗಿ ಆತ್ಮಗುಣ ಭೂಯಿಷ್ಠರಾಗಿದ್ದ ಶ್ರೀ ರಂಗಸ್ವಾಮಿ ಚಕ್ರವರ್ತಿಗಳವರ ಕುಮಾರ್ತಿ ಶ್ರೀಮತಿ ಸರೋಜಮ್ಮನವರನ್ನು 1935 ನೆಯ ಭಾವ ಸಂವತ್ಸರದಲ್ಲಿ ವಿವಾಹವಾದರು.

## ನಮ್ಮ ಚಿಕ್ಕತಾಯಿಯವರ ವ್ಯಕ್ತಿತ್ವ

ಅಂದಿನಿಂದ ನಮಗೆ ಮಾತೃವಿಯೋಗದಿಂದುಂಟಾದ ವ್ಯಥೆಯು

ಸಾಗಿತು. ನಮ್ಮ ಮಾತೃಶ್ರೀಯವರಾದ ಶ್ರೀಮತಿ ಸರೋಜಮ್ಮನವರು ನಮ್ಮನ್ನು ತಮ್ಮ ಮಕ್ಕಳಿಗಿಂತಲೂ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದರು. ಈಗಲೂ ಹಾಗೆ ವರ್ತಿಸುತ್ತಿದ್ದಾರೆ. ನಮ್ಮ ಮಾತೃಶ್ರೀಯವರಲ್ಲಿ ತಾಳ್ಮೆ ಪೂರ್ಣವಾಗಿದೆ. ಮತ್ತು ಪ್ರತಿಭೆ ಕಾರ್ಯನಿರ್ವಾಹ ದಕ್ಷತೆ ಇವೆರಡೂ ಅವರ 14–15ನೇ ವಯಸ್ಸಿನಿಂದ ಬಂದದ್ದೆಂದು ತೋರುತ್ತದೆ. ಇವರು ಅಜಾತಶತ್ರುಗಳಾಗಿದ್ದಾರೆ. ಇವರ ಅನುಗ್ರಹವು ನಮಗೆಲ್ಲಾ ರಕ್ಷಾಕವಚವಾಗಿರಲೆಂದು ಹಾರೈಸುತ್ತೇನೆ.

## ದ್ವಿತೀಯ ವಿವಾಹಾನಂತರವೂ ಗ್ರಂಥರಚನಾಕಾರ್ಯದ ಮುಂದುವರಿಕೆ

ನಮ್ಮ ಮಾತೃಶ್ರೀಯವರಾದ ಶ್ರೀಮತಿ ಸರೋಜಮ್ಮ ಇವರ ವಿವಾಹವಾದ ಮೇಲೂ ನಮ್ಮ ತಂದೆಯವರು ವಿದ್ಯಾ ವ್ಯಾಪಾರವನ್ನು ಬಿಡಲಿಲ್ಲ. ಆಗಲೂ ಸಹ "ಚರ್ಯಾ ವಾಕ್ಯ" ಎಂಬ ವ್ಯಾವಹಾರಿಕ ಪದಗಳ ಸಂಗ್ರಹವಾದ ವಿಸ್ತೃತ ಗದ್ಯ ಗ್ರಂಥವನ್ನು ಬರೆದರು. ಅದು ಸುಮಾರು 85 ಚರ್ಯೆಗಳಿಂದ ಕೂಡಿದ್ದುದಾಗಿತ್ತು. ಅದೂ ಸಹ, ನಾವೆಲ್ಲರೂ ಜೀವನಾರ್ಥವಾಗಿ ಹೊರಗಡೆ ಇದ್ದ ಕಾರಣ, ನಮ್ಮ ತಂದೆಯವರಿಗೆ ವಾರ್ಧಕ್ಯ ಬಂದದ್ದರಿಂದಲೂ ಗೆದ್ದಲು ಹುಳುವಿಗೆ ಆಹಾರವಾಗಿ ನಮ್ಮ ಕೈಗೆ ದಕ್ಕದೇ ಹೋಯಿತು.

## ಕೊನೆಯವರೆಗೂ ಅನುಷ್ಠಾನದ ಆಚರಣೆ

ಈ ರೀತಿಯಾಗಿ ನಮ್ಮ ತಂದೆಯವರು ತಮ್ಮ 90ನೇ ವಯಸ್ಸಿನಲ್ಲಿ ತುಂಬುಜೀವನ ನಡೆಸಿ 19೮1ನೇ ಇಸವಿ, ದುರ್ಮತಿ ಸಂವತ್ಸರದ ಆಷಾಢ ಬಹುಳ ಸಪ್ತಮಿಯಂದು ದೇವಾಧೀನರಾದರು. ಅದುವರೆಗೂ ತಮ್ಮ ಜ್ಞಾನಾನುಷ್ಠಾನಗಳನ್ನು ತಪ್ಪದೆ ಅನುಷ್ಠಿಸುತ್ತಿದ್ದರು.

## ನಮ್ಮ ತಂದೆಯವರ ಮಕ್ಕಳ ಸ್ಥೂಲ ಪರಿಚಯ

ಈ ಪ್ರಕಾರ ತೊಂಭತ್ತು ವರ್ಷ ಕಾಲ ಜೀವನ ಸಾಗಿಸಿದ ನಮ್ಮ ತಂದೆ

ಯವರಿಗೆ ಮೊದಲನೇ ಕುಟುಂಬಕ್ಕೆ 3 ಜನ ಮಕ್ಕಳೂ ಎರಡನೇ ಕುಟುಂಬಕ್ಕೆ ಎಂಟು ಜನ ಮಕ್ಕಳೂ ಆಗಿದ್ದು ಇವರಲ್ಲಿ ಈಗ ಹತ್ತು ಮಂದಿ ಮಕ್ಕಳೂ ನೆಮ್ಮದಿಯಿಂದ ಇದ್ದಾರೆ.

ಅವರಲ್ಲಿ ನನ್ನ ಜ್ಯೇಷ್ಠ ಸೋದರಿಯಾದ ಶ್ರೀಮತಿ ಸೌ॥ ಶ್ರೀರಂಗಮ್ಮ ನವರು ಸುಮಾರು ನಲವತ್ತು ವರ್ಷಗಳ ಹಿಂದೆಯೇ ಕಾಲವಾದರು. ಇನ್ನು ಮಿಕ್ಕವರೆಲ್ಲಾ ನಮ್ಮ ತಂದೆಯವರ ಅನುಗ್ರಹದಿಂದ ಕ್ಷೇಮದಿಂದ ಇದ್ದೇವೆ.

ಈ ಕೆಳಗೆ ನಮ್ಮೆಲ್ಲರ ಹೆಸರನ್ನೂ ನೀಡಲಾಗಿದೆ—

1. ವಿದ್ವಾನ್. ಸೋ. ರಾಮಸ್ವಾಮಿ ಐಯ್ಯಂಗಾರ್ಯರು
2. ವಿದ್ವಾನ್. ಸೋ. ರಂಗನಾಥಾಚಾರ್ಯರು
3. ಶ್ರೀಮತಿ ಸೌ॥ ಶಾಂತಮ್ಮ
4. ಶ್ರೀಮತಿ ಸೌ॥ ಸುಜಯಾ
5. ಶ್ರೀಮತಿ ಸೌ॥ ಜಯಾ
6. ಶ್ರೀಮತಿ ಸೌ॥ ಗೋದಾ
7. ಶ್ರೀಮಾನ್ ಎನ್. ಜೆ. ರಾಜಗೋಪಾಲ್
8. ವಿದ್ವಾನ್. ಸೋ. ನರಸಿಂಹಾಚಾರ್ಯ
9. ಶ್ರೀಮತಿ॥ ಸೌ॥ ರುಕ್ಮಿಣೀ
10. ಶ್ರೀಮಾನ್ ಎನ್. ಜೆ. ಶೇಷಾದ್ರಿ, ಬಿ.ಇ.

ಇವರೆಲ್ಲರೂ ವಿದ್ಯಾವಂತರೂ ಮಾತಾಪಿತೃಭಕ್ತರೂ ಆಗಿರುತ್ತಾರೆ. ಈ ನಾವೆಲ್ಲರೂ ನಮ್ಮ ತಂದೆಯವರ ನೂರನೇ ವರ್ಷದ ವರ್ಧಂತಿಯ ಸ್ಮರಣಾರ್ಥವಾಗಿ ಈ ಚರಿತ್ರೆಯ ಕಿರುಹೊತ್ತಿಗೆಯನ್ನು ಬಿಡುಗಡೆ ಮಾಡಿ, ಅವರ ಸ್ಮರಣೆಯ ಮೂಲಕ ಕೃತಾರ್ಥರಾಗಿರುತ್ತೇವೆಂದು ವಿಜ್ಞಾಪನೆ.

। ಶುಭಂ ಭೂಯಾತ್ ।

